ಶ್ರೀಮನ್ನಿಗಮಾಂತಮಹಾದೇಶಿಕಸಪ್ತಮಶತಮಾನೋತ್ಸವ
ಪ್ರಕಟಣೆ

# ವಿಶ್ವಧರ್ಮ-ಪ್ರಪತ್ತಿ



ಲೇಖಕರು :
ಡಿ. ಕೃಷ್ಣಯ್ಯಂಗಾರ್

ಪ್ರಕಟಣೆ :
ಶ್ರೀ ವೆಂಕಟೇಶ ಸಭಾ (ರಿ.), ಮೈಸೂರು-4

ಶ್ರೀಮನ್ನಿಗಮಾಂತಮಹಾದೇಶಿಕಸಪ್ತಮಶತಮಾನೋತ್ಸವ
ಪ್ರಕಟಣೆ

# ವಿಶ್ವಧರ್ಮ–ಪ್ರಪತ್ತಿ



ಲೇಖಕರು :

ಡಿ. ಕೃಷ್ಣಯ್ಯಂಗಾರ್

ಪ್ರಕಟಣೆ :
ಶ್ರೀ ವೆಂಕಟೇಶ ಸಭಾ (ರಿ.), ಮೈಸೂರು–4

# ವಿಜ್ಞಾಪನೆ

ಶ್ರೀಮನ್ನಿಗಮಾಂತ ಮಹಾದೇಶಿಕರ ಸಪ್ತಮ ಶತಮಾನೋತ್ಸವವನ್ನು ಮೈಸೂರು ಶ್ರೀ ವೇಂಕಟೇಶ ಸಭೆಯು ಬಹು ವೈಭವಯುತವಾಗಿ ಆಚರಿಸಿತು. ಈ ಮಹೋತ್ಸವದ ಸವಿನೆನಪಿಗಾಗಿ ಅನೇಕ ಪ್ರಕಟನೆಗಳನ್ನು ಹೊರಡಿಸಿದೆ. ಅವುಗಳಲ್ಲಿ ಬಹು ಮುಖ್ಯವಾದುವು. "ದೇಶಿಕ ಸಂಭಾವನಾ" "ಪಾದುಕಾಸಹಸ್ರ" "ಅಭಯಪ್ರದಾನಸಾರ" "ವಿಶ್ವಧರ್ಮ-ಪ್ರಪತ್ತಿ" ಇತ್ಯಾದಿ. ಕೊನೆಯ ಎರಡು ಪುಟ್ಟ ಪುಸ್ತಕಗಳನ್ನು ಕನ್ನಡ ಭಾಷೆಯಲ್ಲಿ ಬರೆದು ಸಹೃದಯರಲ್ಲಿ ಸಮರ್ಪಿಸುವ ಭಾಗ್ಯ ಒದಗಿದುದಕ್ಕಾಗಿ ಅತ್ಯಂತ ಹರ್ಷವಾಗಿದೆ. ಇದಕ್ಕೆ ಶ್ರೀ ನಿಗಮಾಂತ ಮಹಾದೇಶಿಕರ ಕೃಪಾಪೂರಿತ ಅನುಗ್ರಹ ವಿಶೇಷವೇ ಕಾರಣವಾಗಿದೆ. ಇದನ್ನು ಅತ್ಯಲ್ಪ ಕಾಲದಲ್ಲಿ ಅಂದವಾಗಿ ಶ್ರೀಕಾಂತ ಪವರ್ ಪ್ರೆಸ್ಸಿನವರು ಮುದ್ರಿಸಿ ಕೊಟ್ಟಿರುತ್ತಾರೆ. ಇದರಿಂದ ಸರ್ವಾಂತರ್ಯಾಮಿಯಾದ ಶ್ರೀ ಲಕ್ಷ್ಮೀ ಹಯಗ್ರೀವಸ್ವಾಮಿಯು ಸುಪ್ರೀತನಾಗಲಿ ಎಂದು ಅತ್ಯಂತ ಭಕ್ತಿಯಿಂದ ಬೇಡುತ್ತಿದ್ದೇನೆ.

ಮೈಸೂರು
5-2-1969

ಇತಿ ಸದ್ಗುರು ಚರಣರೇಣುಃ
ಡಿ. ಕೃಷ್ಣಯ್ಯಂಗಾರ್

G. Subrapille
15/11/71
K Hulli

# ವಿಶ್ವಧರ್ಮ—ಪ್ರಸಕ್ತಿ

## ಪೀಠಿಕೆ

ಧರ್ಮ—"ಧೃಧರ್" ಎಂಬ ಧಾತುವಿನಿಂದ ನಿಷ್ಪನ್ನವಾಗಿರುವ ಧರ್ಮ ಶಬ್ದಕ್ಕೆ ಇರುವಷ್ಟು ವಿಶಾಲವಾದ ಅರ್ಥವ್ಯಾಪ್ತಿ ಪ್ರಾಯಃ ಮತ್ತಾವ ಶಬ್ದಕ್ಕೂ ಇಲ್ಲವೆಂದು, ಹೇಳಬಹುದು. ಪ್ರಪಂಚದಲ್ಲಿ ಅತ್ಯಂತ ಪ್ರಾಚೀನತಮವಾದ ಶಬ್ದಗಳಲ್ಲಿ ಇದೊಂದಾಗಿದೆ. ಇದು ಗುಣ, ಸ್ವಭಾವ, ಕರ್ತವ್ಯ, ಜೀವನದಕ್ರಮ, ತತ್ವಶಾಸ್ತ್ರ ಮತ್ತು ನಿರ್ದಿಷ್ಟವಾದ ಮತಾಚಾರ ಆಧಾರವನ್ನುಳ್ಳ ಜೀವನಕ್ರಮ ಅಥವಾ ಮನೋಭಾವ—ಮೊದಲಾದ ಅನೇಕ ಅರ್ಥಗಳನ್ನು ಹೊಂದಿದೆ. ಇದಲ್ಲದೆ, ಪ್ರಾಣಿಧರ್ಮ, ಮನೋಧರ್ಮ, ಕಾಲಧರ್ಮ, ಮಾನವಧರ್ಮ, ದೇಶಧರ್ಮ, ವರ್ಣಾಶ್ರಮಧರ್ಮ ಪ್ರಜಾಧರ್ಮ, ರಾಜಧರ್ಮ—ಇತ್ಯಾದಿ ಅನೇಕ ಶಬ್ದಗಳಲ್ಲಿ ವಿಧವಿಧವಾದ ಪಾರಿಭಾಷಿಕ ಅರ್ಥಗಳನ್ನು ಹೊಂದಿದೆ."ಧರ್ಮ"ದ ಲಕ್ಷಣವನ್ನು ನಿರ್ದಿಷ್ಟವಾಗಿ ತಿಳಿಸುವ ಪ್ರಯತ್ನಗಳು ಈ ಕಾರಣದಿಂದಲೇ ಪೂರ್ಣವಾಗಿ ಯಶಸ್ವಿಯಾಗಿಲ್ಲವೆಂದು ತೋರುತ್ತದೆ.

ಮಾನವನ "ನಾಗರಿಕ" ಜೀವನ ಪ್ರಾರಂಭವಾಗುವುದಕ್ಕೆ ಮುಂಚೆಯೂ ಒಂದು ವಿಧವಾದ "ಧರ್ಮ" ಇದ್ದಿರಬೇಕೆಂದು ಊಹಿಸಬಹುದು. ಆ "ಧರ್ಮ"ದ ತಳಹದಿಯ ಮೇಲೆಯೇ ಮಾನವ ಸಮಾಜ ಬೆಳೆದು ಬಂದಿರಬೇಕು. ಆದಿಮಾನವನ ಸಮಾಜದ ಸ್ವರೂಪ, ಆವರಣ ಪರಿಸ್ಥಿತಿ, ಇತರ ಸಮಸ್ಯೆಗಳು, ಇವುಗಳಿಗೆ ತಕ್ಕಂತೆ ಅವನ ಅಭಿವೃದ್ಧಿಗೆ ಅನುಕೂಲವಾದ ಒಂದು "ಧರ್ಮ" ರೂಪುಗೊಂಡಿರಬೇಕು. "ಧರ್ಮೋ ರಕ್ಷತಿ ರಕ್ಷಿತಃ"ಎಂಬಂತೆ ಅಂದಿನಿಂದ ಅವನು ಪಾಲಿಸುತ್ತ ಬಂದ ಧರ್ಮವು ಅವನನ್ನು ರಕ್ಷಿಸುತ್ತ ಬಂದಿರಬೇಕೆಂದು ಊಹಿಸಬಹುದು. ಆದರೆ ಆ "ಧರ್ಮ"ದ ಸ್ವರೂಪ ಹೇಗಿತ್ತೆಂದು ನಿರ್ಧರಿಸಲು ಆಧಾರ ಸಾಲದು. ಆ ವಿವೇಚನೆ ಈಗ ಅಷ್ಟೇನೂ ಪ್ರಕೃತವೂ ಅಲ್ಲ. ಏಕೆಂದರೆ ಮಾನವನ

ಬುದ್ಧಿ ಭಾವಗಳು ಕ್ರಮವಾಗಿ ವಿಕಾಸ ಹೊಂದುತ್ತ ಬಂದು ಅವನ ಸಮಾಜ ಅಪರಿಮಿತವಾಗಿ ಬೆಳೆದು ಶಾಖೋಪಶಾಖೆಗಳಾಗಿ ಅನೇಕ ವಿಧವಾದ ಆವರಣ ಸನ್ನಿವೇಶಗಳಿಗೆ ಸಿಲುಕಿ ಪ್ರಪಂಚದ ನಾನಾ ಭಾಗಗಳಲ್ಲಿ ಒಂದೊಂದು ಶಾಖೆಯೂ ಸ್ವತಂತ್ರವಾದ ಬೆಳವಣಿಗೆಯನ್ನು ಹೊಂದುತ್ತ ಬಂದುದರಿಂದ "ಧರ್ಮ"ದಲ್ಲಿಯೂ ಒಂದು ಬಗೆಯ ವೈವಿಧ್ಯ ಏರ್ಪಟ್ಟಿತು. ಒಂದು ಕಾಲದಲ್ಲಿ ಒಂದೇ ಆಗಿದ್ದ ಧರ್ಮ, ಕಾಲಕ್ರಮದಲ್ಲಿ ಅನೇಕ ಮುಖಗಳನ್ನು ಪಡೆಯಿತು. ಹೀಗೆ ಧರ್ಮದ ಸ್ವರೂಪದಲ್ಲಿ ವೈವಿಧ್ಯವು ಏರ್ಪಟ್ಟರೂ ಅದರ ಮೂಲ ಉದ್ದೇಶದಲ್ಲಿ ಅಂದರೆ ಆಯಾ ಸಮಾಜದ ಯೋಗಕ್ಷೇಮ ನಿರ್ವಹಣೆಯಲ್ಲಿ ಬದಲಾವಣೆಯುಂಟಾಗಲಿಲ್ಲ. ವ್ಯಕ್ತಿಯ ಅಥವಾ ಸಮಾಜದ ಬುದ್ಧಿಭಾವಗಳು ಆಧ್ಯಾತ್ಮಿಕ ಮಟ್ಟವನ್ನು ಮುಟ್ಟದ ಸಂದರ್ಭಗಳಲ್ಲಿ "ಧರ್ಮ"ವು ಕೇವಲ ಸಾಮಾಜಿಕ ಮಾನವೀಯತೆ ಅಥವಾ ಭೌತಿಕ ಜೀವನ ಅಥವಾ ರಾಷ್ಟ್ರೀಯತೆಯ ಅಂಶಗಳನ್ನೊಳಗೊಂಡ ಜೀವನ ಕ್ರಮವಾಗಿ ರೂಪುಗೊಂಡಿತು. ಭೌತಿಕ ಜೀವನದ ಅನುಭವಗಳು ಕಾಲಕ್ರಮದಲ್ಲಿ ಆಧ್ಯಾತ್ಮಿಕ ನಂಬಿಕೆಯ ಮಟ್ಟವನ್ನು ಮುಟ್ಟಿ, ಸರ್ವ ನಿಯಾಮಕವೂ ಸರ್ವ ಶಕ್ತವೂ ಆದ ತತ್ವವೊಂದು ಮಾನವ ಜೀವನದ ಆಗುಹೋಗುಗಳಿಗೆಲ್ಲ ಕಾರಣವಾಗಿದೆ ಎಂಬ ಭಾವನೆ ಬೇರೂರಿದಂತೆಲ್ಲ, ಧರ್ಮವು, ತತ್ವ, ನೀತಿ, ಆಧ್ಯಾತ್ಮಿಕ ಶ್ರದ್ಧೆ, ಇತ್ಯಾದಿ ಅಂಶಗಳನ್ನೊಳಗೊಂಡಿತು. ಅದರಲ್ಲೂ ಸಹ ಆಧ್ಯಾತ್ಮಿಕ ಭಾವನೆ, ದೇವತಾಸ್ವರೂಪ ಮತ್ತು ಉಪಾಸನೆಯ ಆಚಾರ ವ್ಯವಹಾರಗಳಲ್ಲಿ, ಬೆಳೆದು ಬಂದ ಭೇದಗಳ ದೆಸೆಯಿಂದ ಧರ್ಮಗಳ ಅಂತರ ಹೆಚ್ಚಾಗುತ್ತ ಬಂದು ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಪರಿಸ್ಥಿತಿಗಳ ಕಾರಣ ಸಂಘರ್ಷಗಳೂ ಉಂಟಾಗಿ ಧರ್ಮದ ಹೆಸರಿನಲ್ಲಿ ರಕ್ತದ ಕೋಡಿಗಳೂ ಹರಿದವು. ಮನುಷ್ಯನ ಭೇದಬುದ್ಧಿ, ಅಂಧಶ್ರದ್ಧೆ ಮತ್ತು ದ್ವೇಷಾಸೂಯೆಗಳು ವಿವೇಚನಾ ಶಕ್ತಿಯನ್ನು ಕುಂಠಿತಗೊಳಿಸಿದವು. ಒಂದು ಧರ್ಮ ಮತ್ತೊಂದಕ್ಕೆ ದ್ವೇಷ್ಯವಾಯಿತು ಹೀಗೆ ವಿಷವನ್ನು ಹೊರಹೊಮ್ಮಿಸಿದ ಧರ್ಮಸಾಗರದ ಮಥನ ಮುಂದುವರಿದು ಅಮೃತವನ್ನು ಕೊಡದೆ ಇರಲಿಲ್ಲ. ಈ ಕಾರ್ಯವನ್ನು ತತ್ವಜ್ಞಾನಿಗಳೆಂಬ ಮಂದರಪರ್ವತ ಮುಂದುವರಿಸದೆ ಇದ್ದಿದ್ದರೆ, ಮಾನವಕುಲ ಧರ್ಮದ

ಹೆಸರಿನಲ್ಲಿಯೇ ನಾಶವನ್ನು ಹೊಂದುತ್ತಿದ್ದಿತೋ ಏನೊ! ಇಷ್ಟರಲ್ಲಿ ಹುಟ್ಟಿ ಬೆಳೆದ ವಿಜ್ಞಾನದ ನಾಗಾಲೋಟವೂ ಸಹ ಒಂದು ದೃಷ್ಟಿಯಿಂದ "ಧರ್ಮ ಯುದ್ಧ"ಗಳನ್ನು ತಡೆದು ನಿಲ್ಲಿಸಿದರೂ, ಇನ್ನೊಂದು ವಿಧವಾದ ವಿನಾಶ ಕಾರಕ ಪ್ರಗತಿಯನ್ನು ಹೊಂದಿ, ಮಾನವ ಜನಾಂಗದ ದೃಷ್ಟಿಯನ್ನು ವಿಶ್ವ ಶಾಂತಿ, ವಿಶ್ವಕಲ್ಯಾಣಗಳತ್ತ ಸೆಳೆಯುತ್ತ ಬಂದಿದೆ. ಒಂದು ಕಾಲದ ಧರ್ಮವಾಗಿದ್ದ ರಾಷ್ಟ್ರಪ್ರೇಮ ಎಂಬುದು ಅಂತರ ರಾಷ್ಟ್ರೀಯತೆಯ ಮೂಲಕ "ವಿಶ್ವರಾಷ್ಟ್ರ" ಭಾವನೆಯನ್ನು ಮೂಡಿಸಿದೆ. ಹೀಗೆಯೇ ಆಧ್ಯಾತ್ಮಿಕ ಮಟ್ಟದಲ್ಲಿಯೂ ಸಹ ಸರ್ವಧರ್ಮ ಸಮನ್ವಯದ ಪ್ರಯತ್ನಗಳು ನಡೆಯುತ್ತ ಬಂದಿವೆ. ಒಂದೊಂದು ಧರ್ಮದ, ಒಂದೊಂದು ರಾಷ್ಟ್ರದ ಅಥವಾ ಒಂದೊಂದು ಮತದ ಧಾರ್ಮಿಕ ಭಾವನೆಗಳನ್ನೆಲ್ಲ ಪರಿಶೀಲಿಸಿ, ಸಮಗ್ರಮಾನವಕುಲಕ್ಕೇ ಅನ್ವಯವಾಗುವಂತಹ " ವಿಶ್ವಧರ್ಮ "ವನ್ನು ಕಂಡುಹಿಡಿಯಲು ಸಾಧ್ಯವೇ ಎಂಬ ಪ್ರಶ್ನೆ ಇಂದು ಅನೇಕ ಧಾರ್ಮಿಕ ನಾಯಕರನ್ನು ಕಾಡುತ್ತಿದೆ.

ಇಂತಹ ಭಾವನೆ ಭಾರತದಲ್ಲಿ"ಸರ್ವೇ ಜನಾಃ ಸುಖಿನೋ ಭವಂತು" ಎಂಬ ಆಶಯದ ಮೂಲಕ ಬಹಳ ಹಿಂದಿನಿಂದಲೂ ಪ್ರಚಾರದಲ್ಲಿದೆ. "ಹಿಂದೂ ಧರ್ಮ" ಎಂಬುದು ಅನೇಕ ವಿಧವಾದ ಅಂತರ ಸಮಸ್ಯೆಗಳನ್ನು ಆಂದೋಳನಗಳನ್ನು, ಮಾತ್ರವಲ್ಲದೆ, ರಾಜಕೀಯ ಪರಿಸ್ಥಿತಿಯಿಂದಾಗಿ ಅನೇಕ ಅನ್ಯ ಧರ್ಮಗಳೊಡನೆ ಸಂಘರ್ಷಗಳನ್ನು ಹೊಂದಿದರೂ ಸಹ, ಕಂದದೆ ಕುಂದದೆ ಕಾಲಕ್ಕೆ ತಕ್ಕಂತೆ ಹೊಸ ಚೈತನ್ಯವನ್ನು ಹೊಂದುತ್ತ ಬಂದಿದೆ. ಎಲ್ಲ ಧರ್ಮಗಳ ಮುಖ್ಯಾಂಶಗಳನ್ನು ಎಲ್ಲ ಸಂಸ್ಕೃತಿಗಳ ತಿರುಳನ್ನು ಒಳಪಡಿಸಿಕೊಂಡರೂ ಸಹ ತನ್ನ ಸ್ವರೂಪವನ್ನು ಉಳಿಸಿ ಕೊಂಡಿದೆ.

ಇಂತಹ ಭಾರತೀಯ ಸಂಸ್ಕೃತಿಗೆ ಕಿರೀಟಪ್ರಾಯವಾದ ಹಿಂದೂ ಧರ್ಮದ ಲಕ್ಷಣವನ್ನೂ ಸಹ ಖಚಿತವಾಗಿ ನಿರ್ದೇಶಿಸಲು ಸಾಧ್ಯವಾಗಿಲ್ಲ. ಇದಕ್ಕೆ ಕಾರಣ ಬಹಳ ಗಹನವಾಗಿದೆ. ಭಾರತದೇಶದಲ್ಲಿ ಆಧ್ಯಾತ್ಮಿಕ ಭಾವನೆಯ ಹುಟ್ಟು ಬೆಳವಣಿಗೆಯ ಸಮಗ್ರ ಇತಿಹಾಸವನ್ನು ಪರಿಶೀಲಿಸಿದಾಗ ಮಾತ್ರ ಹಿಂದೂ ಧರ್ಮದ ಪರಿಚಯ ಸಾಧ್ಯವಾಗುತ್ತದೆ. ಪ್ರಾಚೀನ

ತವುವಾದ ವೇದ, ವೇದಾಂಗಗಳು, ರಾಮಾಯಣ, ಮಹಾಭಾರತ, ಪುರಾಣ ಇತಿಹಾಸಾದಿ ಗ್ರಂಥರಾಶಿ, ಇವುಗಳೊಡನೆ ಬೇರೆ ಬೇರೆ ಕಾಲ, ಸನ್ನಿವೇಶಗಳಲ್ಲಿ ಹುಟ್ಟಿ ಬೆಳೆದ ಅನೇಕ ತತ್ವಗಳು, ದರ್ಶನಗಳು, ಇವುಗಳ ಮೂಲಕ ಹಿಂದೂ ಧರ್ಮವು ರೂಪುಗೊಂಡಿದೆ ಎಂಬ ವಿಚಾರವನ್ನು ತತ್ವ ಶಾಸ್ತ್ರಜ್ಞರು ಅರಿತೇ ಇರುವರು. ಭಾರತೀಯರ ಆಧ್ಯಾತ್ಮಿಕ ಪರಿಶೋಧನೆ ಪ್ರಪಂಚದಲ್ಲಿಯೇ ಅತಿ ಪ್ರಾಚೀನವೂ, ಅತ್ಯಂತ ದೀರ್ಘಕಾಲದ ಬೌದ್ಧಿಕ ಮತ್ತು ಭಾವಾತ್ಮಕ ವಿಕಾಸದ ಫಲವೂ ಆಗಿದೆ. ಇದರಿಂದಾಗಿ, ಜೀವನದ ಮೂಲಧ್ಯೇಯಗಳು ಪುರುಷಾರ್ಥಗಳೆಂದು ಅಂಗೀಕರಿಸಲ್ಪಟ್ಟವು. ಧರ್ಮವು ಈ ಪುರುಷಾರ್ಥಗಳಲ್ಲಿ ಮೊದಲನೆಯದಾಗಿ ಒಪ್ಪಲ್ಪಟ್ಟಿದೆ. ಆದರೆ ಧರ್ಮ ವೊಂದೇ ಪುರುಷಾರ್ಥವಾಗಿ ಪರಿಗಣಿಸಲ್ಪಡಲಿಲ್ಲ. ಸಾಮಾನ್ಯ ಜನರಿಗೆ ಅರ್ಥ, ಕಾಮಗಳೂ ಬೇಕೆಂದೂ, ಈ ಮೂರೂ ತಮ್ಮ ತಮ್ಮ ಎಲ್ಲೆ ಗಳನ್ನು ಮೀರದಂತೆ ಬೆಳೆದು ಸಮನ್ವಯ ಹೊಂದಿ ಅಂತಿಮ ಪುರುಷಾರ್ಥ ವಾದ ಮೋಕ್ಷಕ್ಕೆ ಸಾಧನವಾಗಬೇಕೆಂದು ಭಾವಿಸಲಾಗಿದೆ.

ಈ ಮಟ್ಟದ ಆಧ್ಯಾತ್ಮಿಕ ಭಾವನೆ ಸುಮಾರು ಕ್ರಿಸ್ತಪೂರ್ವದ ಕಾಲ ದಲ್ಲಿಯೇ ಬೆಳೆದಿದ್ದು ತತ್ವಶಾಸ್ತ್ರಜ್ಞರ ಈ ಸಂಶೋಧನೆ, ಅನೇಕವೇಳೆ ಕಾಳಿದಾಸನೇ ಮುಂತಾದ ಮಹಾ ಕವಿಗಳ ವಾಣಿಗಳಲ್ಲಿಯೂ, ಪ್ರಚುರ ವಾಗಿದ್ದಿತು. ಉಪನಿಷತ್ತುಗಳ ತತ್ವವು ಪವಿತ್ರವಾದ ಗಂಗಾಜಲದಂತೆ ವಿಶಾಲವಾಗಿ ಹರಡಿತ್ತು. ಆದರೆ "ಚಕ್ರಾರಪಂಕ್ತಿರಿವ ಗಚ್ಛತಿ ಭಾಗ್ಯ ಪಂಕ್ತಿಃ" ಎಂಬಂತೆ ಒಂದು ಕಾಲದಲ್ಲಿ ಈ ವೈದಿಕ ಧರ್ಮಕ್ಕೂ ಮಂಕು ಬಡಿಯಿತು. ಅನೇಕ ವಿಧವಾದ ಆಚಾರ ವ್ಯವಹಾರಗಳು ಬೆಳೆದುಕೊಂಡು ವೈದಿಕಧರ್ಮವು ಲುಪ್ತವಾಗುವ ಸ್ಥಿತಿಯಲ್ಲಿದ್ದಾಗ, ಶ್ರೀ ಶಂಕರಾಚಾರ್ಯರು ಅವತರಿಸಿ, ವೈದಿಕಧರ್ಮದ ಪುನರುದ್ಧಾರ ಕಾರ್ಯವನ್ನು ನೆರವೇರಿಸಿ, ಅದ್ವೈತಸಿದ್ಧಾಂತವನ್ನು ಸ್ಥಾಪಿಸಿದರು. ಅದ್ವೈತ ಸಿದ್ಧಾಂತ ತರ್ಕಬದ್ಧ ವಾದ ತಳಹದಿಯಮೇಲೆ ಸ್ಥಾಪಿಸಲ್ಪಟ್ಟಿದ್ದರೂ, ಸಾಮಾನ್ಯ ಜನತೆಯ ಆಧ್ಯಾತ್ಮಿಕಶ್ರದ್ಧೆ, ಅನುಭವಗಳಿಗೆ ನಿಲುಕದಂತಾಯಿತು. ತತ್ವಕ್ಕೂ, ಮತಾಚಾರಕ್ಕೂ ಇನ್ನೂ ಹೆಚ್ಚಿನ ಸಮನ್ವಯವನ್ನು ತೋರ್ಪಡಿಸುವು ದಕ್ಕಾಗಿ, ಮತ್ತು ಆಬಾಲ ವೃದ್ಧರಿಗೂ ಅನುಷ್ಠಾನಕ್ಕೆ ಯೋಗ್ಯವಾಗು

ವಂತೆ, ಶ್ರೀ ವೈಷ್ಣವಧರ್ಮವನ್ನು ನಿರೂಪಿಸುವುದಕ್ಕಾಗಿ, ವಿಶಿಷ್ಟಾದ್ವೈತ ಸಿದ್ಧಾಂತ ಸ್ಥಾಪಿತವಾಯಿತು. ಜ್ಞಾನಯೋಗ, ಕರ್ಮಯೋಗ, ಭಕ್ತಿ ಯೋಗಗಳ ಹೆಚ್ಚಿನ ಪರಿಶೀಲನೆಯಿಂದ ಇವೂ ಸಹ ಸಾಮಾನ್ಯ ಜನರಿಗೆ ಕಷ್ಟಸಾಧ್ಯವಾಗಿ ಕಂಡುಬಂದ ಕಾರಣ "ಪ್ರಪತ್ತಿಯೋಗ"ವು ಮಾನವ ಜನ್ಮದ ಎಲ್ಲ ಸಮಸ್ಯೆಗಳಿಗೂ ಪರಿಹಾರ ರೂಪವಾಗಿ ನಿರೂಪಿತವಾಯಿತು. ಶ್ರೀ ರಾಮಾನುಜ ಸಿದ್ಧಾಂತವನ್ನು ವಿಸ್ತಾರವಾಗಿಯೂ ಸ್ಪಷ್ಟವಾಗಿಯೂ ನಿರೂಪಿಸುವುದಕ್ಕಾಗಿ 1268 ನೆಯ ಇಸವಿಯಲ್ಲಿ ಅವತರಿಸಿದ ಶ್ರೀ ನಿಗಮಾಂತ ಮಹಾದೇಶಿಕರ ಸಾಧನೆಗಳಲ್ಲಿ " ಪ್ರಪತ್ತಿ ವಿದ್ಯೆ"ಯ ಪರಿಷ್ಕರಣವು ಬಹು ಮುಖ್ಯವಾದುದು. ರಾಮಾನುಜ ಸಿದ್ಧಾಂತದ ಇತರ ಅಂಶಗಳು ಈ "ಪ್ರಪತ್ತಿ ವಿದ್ಯೆಗೆ" ಅನುಗುಣವಾಗಿ ಪರಿಪೋಷಕವೂ ಪೂರಕವೂ ಆಗಿ ಸಮನ್ವಯ ಹೊಂದಿರುವುದು ಗಮನಾರ್ಹವಾಗಿದೆ. ಶ್ರೀ ನಿಗಮಾಂತ ಮಹಾದೇಶಿಕರು ತಮ್ಮ ಅಮೂಲ್ಯವಾದ "ರಹಸ್ಯತ್ರಯಸಾರ"ದಲ್ಲಿ ಈ ಪ್ರಪತ್ತಿಶಾಸ್ತ್ರ ಅಥವಾ ಶರಣಾಗತಿ ತತ್ವದ ಎಲ್ಲ ಅಂಶಗಳನ್ನು ಪರೀಕ್ಷಿಸಿ ನಿರ್ಣಯಿಸಿರುವರು.

ಪ್ರಪತ್ತಿ ವಿದ್ಯೆಯ ವ್ಯಾಪ್ತಿ ಎಷ್ಟು ? ವಿಶ್ವಧರ್ಮವಾಗಲು ಇದಕ್ಕೆ ಇರುವ ಅರ್ಹತೆ ಏನು? ಇದರಲ್ಲಿ ಎಲ್ಲ ಧರ್ಮಗಳ ಸಮನ್ವಯ ಹೇಗುಂಟಾಗಿದೆ? ಇತ್ಯಾದಿ ವಿಚಾರಗಳನ್ನು ಇಲ್ಲಿ ಪರಿಶೀಲಿಸಬಹುದು

ಸರ್ವನಿಯಾಮಕವೂ, ಸರ್ವಶಕ್ತವೂ, ಸರ್ವೋತ್ತಮವೂ ಆದ ತತ್ವವೊಂದಿದೆ ಎಂದು ಒಪ್ಪುವುದು ಆಧ್ಯಾತ್ಮಿಕ ಮಾರ್ಗದಲ್ಲಿ ಮುಖ್ಯವಾದ ಮೊದಲನೆಯ ಹೆಜ್ಜೆ. ಭಾರತೀಯ ವೇದಾಂತಿಗಳೇ ಅಲ್ಲದೆ. ಪ್ರಾಯಃ ಅನೇಕ ಪಾಶ್ಚಾತ್ಯ ಸಿದ್ಧಾಂತಗಳು ಈ ಹೆಜ್ಜೆಯನ್ನಿಟ್ಟಿವೆ. ಅನೇಕ ಆಧುನಿಕ ವಿಜ್ಞಾನಿಗಳೂ ಸಹ, ಈ ಮೂಲತತ್ವವನ್ನು ಒಪ್ಪದೇ ಇಲ್ಲ. ಅಂದಮೇಲೆ ಮಾನವಜನಾಂಗದ ಬಹು ಭಾಗ ಈ ಅಂಶವನ್ನು ಅಂಗೀಕರಿಸುವುದಕ್ಕೆ ಅಡ್ಡಿಯಿಲ್ಲ. ಇನ್ನು ಈ ಪರತತ್ವದ ಸ್ವರೂಪವೆಂತಹುದು ? ಲಕ್ಷ್ಮೀನಾರಾಯಣನೇ, ಶಿವಪಾರ್ವತಿಯರೇ,ಯೇಸುಕ್ರಿಸ್ತನೇ, ಬುದ್ಧನೇ, ಮಹಮದನೇ, ಎಂಬ ಜಿಜ್ಞಾಸೆ ಎರಡನೆಯದು. ಲಕ್ಷ್ಮೀನಾರಾಯಣ ಸ್ವರೂಪನಾದ ಪರಬ್ರಹ್ಮನು, ಸರ್ವಶಬ್ದ ವಾಚ್ಯನು, ಸರ್ವವ್ಯಾಪಿಯೂ,

ಸರ್ವೇಶ್ವರನೂ, ಸರ್ವಶಕ್ತನೂ, ಸೃಷ್ಟಿಸ್ಥಿತಿಲಯಾದಿ ರೂಪವಾದ ಎಲ್ಲ ಕಾರ್ಯಗಳಿಗೂ ಕಾರಣನೂ, ನಿಯಾಮಕನೂ, ಮತ್ತು ಈ ಜಗತ್ತಿಗೆ ಉಪಾದಾನ ಕಾರಣ ಮತ್ತು ನಿಮಿತ್ತಕಾರಣನೂ ಆಗಿದ್ದಾನೆಂಬುದು ವಿಶಿಷ್ಟಾದ್ವೈತದ ಸಮನ್ವಯ ದೃಷ್ಟಿಯ ಫಲವಾಗಿದೆ. ಈ ಪರತತ್ವದ ಹೆಸರಿನಲ್ಲಿ ಭೇದವನ್ನೆಣಿಸಬಹುದಾದರೂ, ಈ ತತ್ವವೂ ಸಹ ವಿಶ್ವಧರ್ಮದ ಅಂಶವಾಗಲು ಅಡ್ಡಿಯಿಲ್ಲ.

ಮೂರನೆಯದಾಗಿ ಪರಬ್ರಹ್ಮ ವಸ್ತುವಿಗೂ, ಜಗತ್ತಿಗೂ ಸಂಬಂಧ ವೇನು ? ಜೀವಾತ್ಮ ಬೇರೆಯೋ ಅಲ್ಲವೇ ? ಬೇರೆಯಾದರೆ ಪರಮಾತ್ಮನಿಗೂ ಜೀವಾತ್ಮರಿಗೂ ಸಂಬಂಧ ಎಂತಹುದು ? ಇವೇ ಮುಂತಾದ ಸಮಸ್ಯೆಗಳಿಗೆ ವಿಶಿಷ್ಟಾದ್ವೈತದ ಉತ್ತರ ಗಮನಾರ್ಹವಾಗಿದೆ. ಇದು ಅನುಭವಗ್ರಾಹ್ಯವೂ ಆಗಿರುವುದಲ್ಲದೆ, ಶ್ರುತಿಸ್ಮೃತಿಗಳ ಆಧಾರವನ್ನು ಹೊಂದಿದೆ. ಈ ವಿಶ್ವವು ಪರಬ್ರಹ್ಮನ ಶರೀರವಾಗಿದೆ. ಇದರ ಆತ್ಮ ಅವನೇ ಆಗಿದ್ದಾನೆ. ಈ ಶರೀರ ಶರೀರಿಭಾವದ ತಾತ್ಪರ್ಯ ಬಹಳ ಗಹನವಾಗಿದೆ. ಸಮಸ್ತ ಚಿದ ಚಿದ್ವಸ್ತುಗಳೂ ಕರ್ಮಸಂಬಂಧದಿಂದ ಸಂಸಾರಚಕ್ರದಲ್ಲಿ ಸಿಕ್ಕಿವೆಯಾದರೂ ಸರ್ವನಿಯಾಮಕನಾದ ಅವನ ಇಚ್ಛೆಗೆ ಅನುಗುಣವಾಗಿ ಮೋಕ್ಷಕ್ಕೆ ಅರ್ಹತೆ ಯನ್ನು ಪಡೆದಿವೆ. ಈ ಮೋಕ್ಷಕ್ಕೆ ಸಾಧನರೂಪವಾಗಿ ಪ್ರಪತ್ತಿಮಾರ್ಗದ ಪ್ರಾಶಸ್ತ್ಯವು ಅಂಗೀಕೃತವಾಗಿದೆ. ಜ್ಞಾನಯೋಗ, ಕರ್ಮಯೋಗ, ಭಕ್ತಿಯೋಗಗಳೆಂಬ ಅನೇಕ ಮಾರ್ಗಗಳಿದ್ದರೂ, ಪ್ರಪತ್ತಿಯೋಗವು ಎಲ್ಲ ರಿಗೂ ಅನ್ವಯಿಸುವ ಸುಲಭ ಮಾರ್ಗವಾಗಿ ವಿಶದಗೊಳಿಸಲ್ಪಟ್ಟಿದೆ. ಪರ ಮಾತ್ಮನು ಎಲ್ಲರ ಉತ್ತಾರಕನು, ರಕ್ಷಕನು, ಎಂಬ ದೃಢವಿಶ್ವಾಸವೇ ಪ್ರಪತ್ತಿಯೋಗದ ಮುಖ್ಯಾಂಶ. ಈ ದೃಢವಿಶ್ವಾಸದಿಂದ ತನ್ನ ರಕ್ಷಣೆಯ ಭಾರವನ್ನು ಪರಮಾತ್ಮನಲ್ಲಿ ಅರ್ಪಿಸುವುದೇ ಭರನ್ಯಾಸ. ಈ ಭರನ್ಯಾಸಕ್ಕೆ ಬೇಕಾದ ಮಾನಸಿಕ ಸ್ಥಿತಿಯನ್ನು ಗುರುಮುಖೇನ ಹೊಂದುವ ಬಗೆ, ಮತ್ತು ಅದರ ಅಂಗಗಳನ್ನೆಲ್ಲ, ಈ ಪ್ರಪತ್ತಿಶಾಸ್ತ್ರದಲ್ಲಿ ವಿಸ್ತಾರವಾಗಿ ನಿರೂಪಿಸಲಾಗಿದೆ. ಈ ಅಂಶವೂ ಸಹ ಸಮಗ್ರ ವಿಶ್ವಕ್ಕೆ ಉತ್ತಾರಕ ವಾಗಿಯೂ, ಮೋಕ್ಷದಾಯಕವಾಗಿಯೂ, ಅಂಗೀಕೃತವಾಗಿರುವುದರಿಂದ 'ವಿಶ್ವಧರ್ಮ'ವಾಗಲು ಸಾಧ್ಯವಿದೆ. ಈ ದೃಷ್ಟಿಯಿಂದ ಪ್ರಪತ್ತಿಯೋಗ

ವನ್ನು ವಿಶ್ವಧರ್ಮವೆಂದು ವ್ಯವಹರಿಸಲಾಗಿದೆ. ಇದರ ಉಪಯೋಗವನ್ನು ಪಡೆಯುವ ಹೊಣೆಗಾರಿಕೆ ಮಾತ್ರ ಜೀವಾತ್ಮನಿಗೆ ಸೇರಿದ್ದು.

'ಜನಾನಾಂ ಜಾನಿಃ ಮಿತ್ರಃಪ್ರಿಯಃ' ಎಂದು ವೇದವು ಪರಮಾತ್ಮನನ್ನು ವರ್ಣಿಸಿದೆ. ಮರುಭೂಮಿಯಲ್ಲಿ ದೊರೆಯುವ ಪರಿಶುದ್ಧ ನೀರಿನಂತೆ ಪರಮಾತ್ಮನು ಜೀವನನ್ನು ರಕ್ಷಿಸುವನು, ಪವಿತ್ರಗೊಳಿಸುವನು. ಪರಮಾತ್ಮನ ಕರುಣೆಯಿಲ್ಲದೆ ಮಾನವನು ಜಗತ್ತಿನಲ್ಲಿ ಏನನ್ನೂ ಸಾಧಿಸಲಾರನು ಅವನು ಜೀವನದಲ್ಲಿ ಸುಖ, ಸಂಪತ್ತು ಶಾಂತಿಹೊಂದಬೇಕಾದರೆ, ಪರಮಾತ್ಮನಲ್ಲಿ ಶರಣಾಗತಿ ಮಾಡುವುದರಿಂದ ಮಾತ್ರ ಸಾಧ್ಯ.

ಉಪನಿಷತ್ತಿನಲ್ಲಿ ಪ್ರಪತ್ತಿನಿರೂಪಣೆ ಬಹು ಚೆನ್ನಾಗಿದೆ. ಮುಕ್ತಿಗೆ ಪ್ರಪತ್ತಿಯೇ ಮುಖ್ಯ ಮಾರ್ಗ ಎಂದು ಈಶಾವಾಸ್ಯ ಉಪನಿಷತ್ತು ತಿಳಿಸುತ್ತದೆ. (ಭೂಯಿಷ್ಠಾಂತೇ ನಮ ಉಕ್ತಿಂ ವಿಧೇಮ). ಇಲ್ಲಿ "ನಮ ಉಕ್ತಿ" ಎಂದರೆ ಶರಣಾಗತಿ, ಶ್ವೇತಾಶ್ವತರ ಉಪನಿಷತ್ತು, ಮಾನವನು ಮೋಕ್ಷ ಪಡೆಯಬೇಕಾದರೆ ಶರಣಾಗತಿಗಿಂತ ಬೇರೆ ಉಪಾಯವಿಲ್ಲ ಎಂದು ಹೇಳುತ್ತದೆ. (ಮುಮುಕ್ಷುರ್ವೈ ಶರಣ ಮಹಂ ಪ್ರಪದ್ಯೇ). ಉಪನಿಷತ್ತುಗಳಲ್ಲೆಲ್ಲಾ ಛಾಂದೋಗ್ಯವು ಬಹು ಪ್ರಾಚೀನವಾದುದು. ಬ್ರಹ್ಮನ ಹತ್ತಿರ ಶಾಶ್ವತವಾಗಿರಬೇಕೆಂದು ಯಾವನು ಅಪೇಕ್ಷಿಸುವನೋ, ಅವನು ಪರಮಾತ್ಮನಲ್ಲಿ ಶರಣಾಗತಿಮಾಡಬೇಕು ಎಂದು ವ್ಯಕ್ತಪಡಿಸಿದೆ. (ಬ್ರಹ್ಮಸಂಸ್ಥೋ ಅಮೃತತ್ವಮೇತಿ.) ಬ್ರಹ್ಮಸಂಸ್ಥೆ ಎಂದರೆ ಬ್ರಹ್ಮನಹತ್ತಿರ ಶಾಶ್ವತವಾಗಿರಬೇಕೆಂದು ಇಚ್ಛಿಸುವವನು. ಮುಂಡಕ, ಮಹಾನಾರಾಯಣ ಉಪನಿಷತ್ತುಗಳು ಕೂಡ, ನ್ಯಾಸವಿದ್ಯೆಗಿಂತ ಉತ್ತಮವಾದುದು ಇನ್ನೊಂದಿಲ್ಲ ಎಂದು ತಿಳಿಸಿವೆ.

ತಮಿಳುನಾಡಿನ ಆಳ್ವಾರರುಗಳು ತಮ್ಮ ಧಾರ್ಮಿಕ ಅನುಭವದ ಫಲವಾಗಿ, ಪರಮಾತ್ಮನನ್ನು ಸಾಕ್ಷಾತ್ಕರಿಸಿ, ಆವೇಶಪೂರಿತ ಪದ್ಯಗಳನ್ನು ಹಾಡಿದ್ದಾರೆ. ಇಂತಹ ಆನಂದದಾಯಕ ಮಧುರಗೀತಗಳಲ್ಲಿ ಮೋಕ್ಷ ಮಾರ್ಗವನ್ನು ವಿವರಿಸಿದ್ದಾರೆ, ಇವೇ ದಿವ್ಯ ಪ್ರಬಂಧಗಳು. ಇವು ವೇದದಷ್ಟೇ ಪವಿತ್ರವಾಗಿವೆ. ಇಂತಹ ಆಳ್ವಾರರುಗಳಲ್ಲಿ ಮೊದಲಿನವರು ನಮ್ಮಾಳ್ವಾರ್ರವರು. ಇವರು ತಮಿಳು ವೇದಕ್ಕೆ ಮೂಲಪುರುಷರು ಇವರನ್ನು ಪ್ರಪನ್ನ

ಜನಕೂಟಸ್ಥರೆಂದು ಕರೆಯಲಾಗಿದೆ. ಇವರು ಪ್ರಪತ್ತಿವಿದ್ಯೆಯ ಮೂಲ, ಸ್ವರೂಪ, ಅಗತ್ಯ, ಆಚರಿಸುವ ಕ್ರಮವೆಲ್ಲವನ್ನೂ ಹೃದಯಂಗಮರೀತಿಯಲ್ಲಿ ವಿವರಿಸಿದ್ದಾರೆ. ಹಾಗೆಯೇ ಶ್ರೀಮದ್ರಾಮಾಯಣದಲ್ಲಿ ಪ್ರಪತ್ತಿ ಧರ್ಮದ ನಿರೂಪಣೆ ಬಹು ಚೆನ್ನಾಗಿದೆ. ಈ ಕಾರಣದಿಂದ ರಾಮಾಯಣವು ಶರಣಾಗತಿವೇದ ಎಂದು ಜಗತ್ಪ್ರಸಿದ್ಧಿಯಾಗಿದೆ.

ನಾಥಮುನಿ, ಯಾಮುನಮುನಿ, ರಾಮಾನುಜಮುನಿ ಇತ್ಯಾದಿ ಪೂರ್ವಾಚಾರ್ಯರು ಪರಮಾತ್ಮನನ್ನು ಹೊಂದುವುದಕ್ಕೆ ಪ್ರಪತ್ತಿಮಾರ್ಗವೇ ಬಹು ಮುಖ್ಯವೆಂದು ಉಪದೇಶಮಾಡಿದ್ದಾರೆ. ಹೀಗೆ ಪ್ರಪತ್ತಿವಿದ್ಯೆಯು ವೇದಪ್ರತಿಪಾದ್ಯವೂ, ಪೂರ್ವಾಚಾರ್ಯ ಪರಂಪರೆಯಿಂದ ಅವಿಚ್ಛಿನ್ನವಾಗಿ ನಡೆದುಬಂದ ಸುಗಮಮಾರ್ಗವೂ ಆಗಿದೆ. ಇದನ್ನು ಸ್ವಾಮಿ ನಿಗಮಾಂತ ಮಹಾದೇಶಿಕರು ತಾವು ಅನುಗ್ರಹಿಸಿರುವ ಗ್ರಂಥಗಳಲ್ಲಿ ಬಹು ಚೆನ್ನಾಗಿ ನಿರೂಪಿಸಿದ್ದಾರೆ. ಪ್ರಪತ್ತಿವಿದ್ಯೆಯ ವಿಶ್ವಕೋಶದಂತಿರುವ ಅವರ ರಹಸ್ಯ ತ್ರಯಸಾರ ಗ್ರಂಥದಲ್ಲಿ ಈ ಬ್ರಹ್ಮವಿದ್ಯೆಯ ಸಮಸ್ತ ವಿಷಯಗಳನ್ನೂ ಪ್ರಮಾಣಗಳಿಂದ ನಿರೂಪಿಸಲಾಗಿದೆ. ಆ ಮಹಾಗ್ರಂಥದ ಬಹು ಸೂಕ್ಷ್ಮ ಪರಿಚಯವೇ ಈ ಸಣ್ಣ ಪುಸ್ತಕವಾಗಿದೆ.

---

## ಶ್ರೀ ವೇದಾಂತ ದೇಶಿಕರು



ವಾದಿದ್ವಿಪಶಿರೋಭಂಗಪಂಚಾನನಪರಾಕ್ರಮಃ ।
ಶ್ರೀಮಾನ್ ವೇಂಕಟನಾಥಾರ್ಯಃ ಚಿರಂ ವಿಜಯತಾಂ ಭುವಿ ॥

॥ ಶ್ರಿಯೈ ನಮಃ ॥

ಶ್ರೀಮತೇ ರಾಮಾನುಜಾಯ ನಮಃ

ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ

ಶ್ರೀ ಶ್ರೀನಿವಾಸ ಮಹಾದೇಶಿಕಾಯ ನಮಃ

ಶ್ರೀಮಾನ್ ವೇಂಕಟನಾಥಾರ್ಯಃ ಕವಿತಾರ್ಕಿಕಕೇಸರೀ ।
ವೇದಾಂತಾಚಾರ್ಯವರ್ಯೋ ಮೇ ಸನ್ನಿಧತ್ತಾಂ ಸದಾ ಹೃದಿ ॥

# ಗುರುಸ್ಮರಣೆ

'ಗುರುಭ್ಯಸ್ತದ್ಗುರುಭ್ಯಶ್ಚ ನಮೋ ವಾಕಮಧೀಮಹೇ ।
ವೃಣೀಮಹೇ ಚ ತತ್ರಾದ್ಯೌ ದಂಪತೀ ಜಗತಾಂ ಪತೀ ।

ಒಳ್ಳೆಯ ಕೆಲಸದ ಪ್ರಾರಂಭ, ಸಮಾಪ್ತಿ ಕಾಲಗಳಲ್ಲಿ ಗುರುಸ್ಮರಣೆ ಮಾಡಬೇಕು. ಹೀಗೆ ಸ್ಮರಣೆ ಮಾಡುವುದರಿಂದ ಶಾಸ್ತ್ರಾರ್ಥ ಸರಿಯಾಗಿ ತಿಳಿದು, ಗುರುಗಳ ಮಹೋಪಕಾರ ನೆನಪಿಗೆ ಬರುವುದು. ಗುರುವಿಗೆ ನಮಸ್ಕಾರ ಎಂದರೆ, ಗುರುಪರಂಪರೆಗೂ ನಮಸ್ಕಾರ ಎಂಬುದು ರೂಢಿ. ಇಂತಹ ಗುರುಪರಂಪರೆಯು ದಿವ್ಯದಂಪತಿಗಳಿಂದ ಹಿಡಿದು, ತನ್ನ ಸ್ವಂತ ಗುರುಗಳವರೆಗೂ ಅನ್ವಯವಾಗುವುದು. ದಂಪತಿ ಎಂಬುದರಿಂದ ಲಕ್ಷ್ಮೀ ನಾರಾಯಣರಿಬ್ಬರೂ ಸದಾ ಒಟ್ಟಿಗೆ ಇರುವರೇ ವಿನಹ ಬೇರೆ ಬೇರೆ ಇರುವುವೇ ಇಲ್ಲ ಎಂದು ಸೂಚಿತವಾಗಿದೆ.

" ಯಸ್ಯದೇವೇ ಪರಾ ಭಕ್ತಿ ರ್ಯಥಾ ದೇವೇ ತಥಾಗುರೌ " ಎಂಬ ಶ್ರುತಿ ವಚನರೀತಿಯಾಗಿ ಪರಮಾತ್ಮನಲ್ಲಿಡುವ ಭಕ್ತಿಯಂತೆ ಗುರುಗಳಲ್ಲಿಯೂ ಭಕ್ತಿಯಿಡಬೇಕು. ಗುರುಗಳು ಮಹೋಪಕಾರಮಾಡಿದ ಮಹಾತ್ಮರು. ಅವರು ಮಾಡುವ ಉಪಕಾರಕ್ಕೆ ಪ್ರತ್ಯುಪಕಾರವೇ ಇಲ್ಲ. ಅವರು ಮಾಡುವ ಉಪಕಾರವನ್ನು ಕುರಿತು, ಶ್ರೀ ವೇದಾಂತದೇಶಿಕರು ನ್ಯಾಸವಿಂಶತಿಯಲ್ಲಿ ಹೀಗೆ ಹೇಳಿದ್ದಾರೆ.

ಅಜ್ಞಾನಧ್ವಾಂತರೋಧಾದಘಪರಿಹರಣಾದಾತ್ಮಸಾಮ್ಯಾವಹತ್ವಾ- ।
ಜ್ಜನ್ಮ ಪ್ರಧ್ವಂಸಿ ಜನ್ಮಪ್ರದಗರಿಮತಯಾ ದಿವ್ಯದೃಷ್ಟಿ ಪ್ರಭಾವಾತ್ ॥
ನಿಷ್ಪ್ರತ್ಯೂಹಾನೃಶಂಸ್ಯಾನ್ನಿಯತರಸತಯಾ ನಿತ್ಯಶೇಷಿತ್ವಯೋಗಾ- ।
ದಾಚಾರ್ಯಸ್ಸದ್ಭಿರಪ್ರತ್ಯುಪಕರಣಧಿಯಾ ದೇವವತ್ಸ್ಯಾದುಪಾಸ್ಯಃ ॥

ಪರಮಾತ್ಮ, ಗುರು (ಆಚಾರ್ಯ) ಇಬ್ಬರೂ ಸಮರು. ಇಬ್ಬರೂ ಅಜ್ಞಾನವೆಂಬ ಕತ್ತಲೆಯನ್ನು ಹೋಗಲಾಡಿಸುವರು. ಪಾಪವನ್ನು ಪರಿಹಾರ ಮಾಡುವರು. ಇಬ್ಬರೂ ಮೋಕ್ಷಮಾರ್ಗವನ್ನು ತಿಳಿಸಿ, ಜೀವನು ಪುನಃ ಸಂಸಾರದಲ್ಲಿ ಬೀಳದಂತೆ ಮಾಡುವರು. ಇಬ್ಬರೂ ಜೀವನ ವಿಷಯದಲ್ಲಿ ಬಹು ಕೃಪೆಯಿಂದಿರುವರು. ಇಬ್ಬರೂ ಶೇಷಿಯಾಗಿ ನಿಂತು ಜೀವನು ಸಂಸಾರ ಸಾಗರವನ್ನು ದಾಟುವಂತೆ ಸಹಾಯಮಾಡುವರು. ಪರಮಾತ್ಮನು ಯಾವಾಗಲೋ ಒಂದುಸಾರಿ ಅವತಾರಮಾಡಿ ಜೀವನಿಗೆ ಮೋಕ್ಷ ದೊರೆಯುವಂತೆ ಮಾಡಿದರೆ, ಗುರುಗಳು ಯಾವಜ್ಜೀವವೂ ಈ ಕಾರ್ಯಕ್ಕಾಗಿಯೇ ಕಂಕಣಬದ್ಧರಾಗಿರುವರು. ಹೀಗೆ ಗುರುಗಳು ಒಂದು ವಿಧದಲ್ಲಿ ಪರಮಾತ್ಮನಿಗಿಂತ ಮೇಲು ಎಂದು ಹೇಳಬೇಕಾಗುತ್ತದೆ.

ಪರಮಾತ್ಮನು ಲೋಕಕ್ಕೆಲ್ಲ ಆದಿಗುರುವು. ಅವನು ಚತುರ್ಮುಖ ಬ್ರಹ್ಮನಿಗೆ, ಗುರುಸ್ಥಾನದಲ್ಲಿ ನಿಂತು ವೇದಗಳನ್ನು, ತತ್ವಹಿತ ಪುರುಷಾರ್ಥಗಳನ್ನೂ ಉಪದೇಶಮಾಡಿದನು. ಅವನು ಪರಮಾಚಾರ್ಯ ಎಂಬುದಕ್ಕೆ ಶ್ರುತಿ, ಸ್ಮೃತಿ, ಪುರಾಣ, ಇತಿಹಾಸ, ಆಚಾರ್ಯರ ಪ್ರಮಾಣ ವಾಕ್ಯಗಳಿವೆ. ಪರಮಾತ್ಮನು ಬ್ರಹ್ಮನ ಮೂಲಕ ಸಕಲ ಶಾಸ್ತ್ರಗಳನ್ನು ಪ್ರಚುರಪಡಿಸಿದನು ಬ್ರಹ್ಮನು, ನಾರದ, ಪರಾಶರ, ಶುಕ, ಶೌನಕಾದಿಗಳಿಂದ ಅಧ್ಯಾತ್ಮ ಸಿದ್ಧಾಂತವು ಜಗತ್ತಿನಲ್ಲಿ ಶಾಶ್ವತವಾಗಿ ನಿಲ್ಲುವಂತೆ ಮಾಡಿದನು. ವ್ಯಾಸ, ಭೀಷ್ಮಾದಿಗಳಲ್ಲಿ ಅನುಪ್ರವೇಶಮಾಡಿ, ಬ್ರಹ್ಮಸೂತ್ರಾದಿಗಳನ್ನು ರಚಿಸುವಂತೆ ಪರಮಾತ್ಮನೇ ಮಾಡಿದ್ದಾನೆ. ಇಷ್ಟೇ ಅಲ್ಲದೆ ತಾನೇ ಹಂಸ, ಹಯಗ್ರೀವ, ನರನಾರಾಯಣ, ರಾಮ-ಕೃಷ್ಣಾದ್ಯವತಾರಮಾಡಿ ತತ್ವಹಿತ ಪುರುಷಾರ್ಥಗಳನ್ನು ಸ್ಥಿರೀಕರಿಸಿದ್ದಾನೆ. ಪಾಂಚರಾತ್ರಾದಿ ಭಗವಚ್ಛಾಸ್ತ್ರಗಳನ್ನು ತಿಳಿಸಿ ಪ್ರಕಾಶಪಡಿಸಿದ್ದಾನೆ. ಆಳ್ವಾರರುಗಳಲ್ಲಿ ಅಂತರ್ಗತನಾಗಿ ಬಂದು ದ್ರಾವಿಡವೇದವನ್ನು ಪ್ರಬಂಧರೂಪದಲ್ಲಿ ಬರುವಂತೆ ಮಾಡಿದ್ದಾನೆ. ಅನಂತರ ನಾಥಮುನಿ, ಯಾಮುನಮುನಿ, ರಾಮಾನುಜಮುನಿ–ಇತ್ಯಾದಿ ಆಚಾರ್ಯರ ಮೂಲಕ, ಶಾಸ್ತ್ರಗ್ರಂಥಗಳನ್ನು ರಚನೆಮಾಡಿಸಿ, ಲೋಕದಲ್ಲಿ ಧರ್ಮಪ್ರಚಾರವಾಗುವಂತೆ ಉಪಕರಿಸಿದ್ದಾನೆ

ಹೀಗೆ ಗುರುಭಜನದಿಂದ ಜ್ಞಾನ ಸಂಪತ್ತು ಹೆಚ್ಚುವುದು. ಒಳ್ಳೆಯ

ಶಿಷ್ಯನಿಗೆ ಮಂತ್ರೋಪದೇಶಮಾಡಿ, ಬ್ರಹ್ಮಜ್ಞಾನ ಹುಟ್ಟುವಂತೆ ಗುರುಗಳು ಮಾಡುವರು. ಇದು ಹಿಂದಿನಿಂದ ಬಂದ ಪದ್ಧತಿ. ಗುರು ಭಕ್ತಿಯಿಂದ ಅಜ್ಞಾನ ತೊಲಗುವುದು. ಗುರುಪರಂಪರಾ ಧ್ಯಾನದಿಂದ ವಚನ,ಸಂಭಾಷಣ ದೋಷಗಳು ಮಾಯವಾಗುವುವು. ಗುರುಗಳ ದಿವ್ಯವಾದ ಉಕ್ತಿಗಳನ್ನು ಮನನಮಾಡುವುದರಿಂದ ಮನಸ್ಸು ಶುದ್ಧವಾಗುವುದು. ಅವರು ಉಪ ದೇಶಮಾಡಿದ ಮಂತ್ರ ಮತ್ತು ಅವುಗಳ ಅರ್ಥವನ್ನು ಅನುಸಂಧಾನ ಮಾಡುವುದು ಅಗತ್ಯ. ಅಂತಹ ಗುರು ಪರಂಪರೆಯನ್ನು ಆಚಾರ್ಯರನ್ನಾಗಿ ಪಡೆದಿರುವ ಭಾಗ್ಯವೇ ಮಹಾಭಾಗ್ಯವೆಂದು ಶ್ರೀವೇದಾಂತ ದೇಶಿಕರು ತಿಳಿಸಿದ್ದಾರೆ. ವಿಶ್ವಧರ್ಮವೆಂಬ ಈ ವಿದ್ಯೆಯು ಸಿದ್ಧಿಸಬೇಕಾದರೆ. ಆಚಾರ್ಯರ ಅನುಗ್ರಹ ಅತ್ಯಗತ್ಯ ಎಂದು ತಿಳಿಸಿದ ಹಾಗಾಯಿತು.

## ಜೀವ ಪರಮಾತ್ಮರ ಸಂಬಂಧ

ಜೀವನು ಸ್ವಭಾವವಾಗಿ ಜ್ಞಾನವಿಕಾಸವುಳ್ಳವನು. ಪರಮಾತ್ಮನಿಗೆ ತುಂಬ ಪ್ರಿಯನು. ಇಂತಹವನು ಸಂಸಾರ ಚಕ್ರಕ್ಕೆ ಸಿಲುಕಿ ಕರ್ಮವಾಸನೆ ಗಳಿಂದ ಬಂಧಿತನಾಗಿ, ಜ್ಞಾನ ಸಂಕೋಚದಿಂದ, ತನ್ನ ಶುದ್ಧ ಸ್ವರೂಪ ವನ್ನು ಕಳೆದುಕೊಂಡು, ದುಃಖದಲ್ಲಿ ಬೀಳುವನು. ಇಂದ್ರಿಯಸುಖದಲ್ಲಿ ನಿರತನಾಗುವನು. ಆದರೆ ಕರುಣಾಶಾಲಿಯಾದ ಭಗವಂತನು ಜೀವನ ಯಾವುದಾದರೊಂದು ಸುಕೃತ ವಿಶೇಷವನ್ನು ಮುಂದಿಟ್ಟುಕೊಂಡು ಸದ್ಗುರುವಿನ ಸಾನ್ನಿಧ್ಯಹೊಂದುವಂತೆಮಾಡಿ, ಆ ಗುರುವಿನ ದಯೆಯಿಂದ ಅವನು ಮೋಕ್ಷಹೊಂದುವಂತೆಮಾಡಿ, ಅವನನ್ನು ತನ್ನಬಳಿಗೆ ಕರೆಸಿಕೊಳ್ಳ ವನು. ಆದುದರಿಂದಲೇ ಜೀವಾತ್ಮರು ಸ್ವಾಮಿಗೆ, ಕುಮಾರ, ಶಿಷ್ಯ, ಪ್ರೇಷ್ಯ, ಶೇಷಭೂತ, ದಾಸಭೂತ–ಎಂದು ಶಾಸ್ತ್ರಗಳು ತಿಳಿಸುತ್ತವೆ. ಜೀವನು ತನಗೆ ಅನಾದಿಯಾಗಿ ಬಂದ ಅವಿದ್ಯಾರೂಪ ಜ್ಞಾನ ಸಂಕೋಚ ದಿಂದ ಪ್ರಕೃತಿ ಎಂಬ ಹಳ್ಳದಲ್ಲಿ ಬಿದ್ದು ಕಷ್ಟಪಡುತ್ತ ತನ್ನ ಸ್ವರೂಪಕ್ಕೆ ಅನುಗುಣವಾದ ಪುರುಷಾರ್ಥಗಳನ್ನು ಪಡೆಯಲು ಉಪಾಯ ಕಾಣದೆ ಇರುವ ಸ್ಥಿತಿಯನ್ನು ರಾಜಕುಮಾರ ದೃಷ್ಟಾಂತದಿಂದ ನಿರೂಪಿಸಲಾಗಿದೆ.

**ರಾಜಕುಮಾರ ನ್ಯಾಯ :—** ಒಬ್ಬ ರಾಜನು ತನ್ನ ಅಂತಃಪುರದ

ಜನರೊಡನೆ ವನವಿಹಾರಕ್ಕಾಗಿ ಕಾಡಿಗೆ ಹೋಗುವನು. ಬಾಲಕನಾದ ಅವನ ಕುಮಾರನು, ಇನ್ನೂ ಮಾತುಕೂಡ ಬಾರದ ಸ್ಥಿತಿಯಲ್ಲಿರುವಾಗ ಎಲ್ಲಿಯೋ ತಪ್ಪಿಸಿಕೊಂಡು ಬೇಡನೊಬ್ಬನಿಗೆ ಸಿಕ್ಕಿ ಬೇಡರ ಕೇರಿಯಲ್ಲಿ ಬೆಳೆಯುತ್ತ ಬರುವನು. ಬೇಡರ ಜೀವನವೇ ಅವನ ಜೀವನವಾಗಿರುವುದು. ಬೇಡರ ನಡೆನುಡಿಗಳೇ ಅವನ ನಡೆನುಡಿಗಳಾಗುವುವು. ಬೇಡರ ಸಂಸರ್ಗ ದಲ್ಲಿ ಬಹುಕಾಲ ಇದ್ದುದರಿಂದ ತಾನೂ ಬೇಡನೇ ಎಂದು ಅವನು ತಿಳಿಯುವನು.

ಹೀಗಿರುವಾಗ ಧರ್ಮಿಷ್ಠರಾದ ಋಷಿಗಳು ಆ ರಾಜಕುಮಾರನ ಆಕಾರ ವನ್ನೂ, ಲಕ್ಷಣಗಳನ್ನೂ ಕಂಡು ಆಶ್ಚರ್ಯಪಟ್ಟು ಅವನು ಬೇಡನಲ್ಲವೆಂದು ನಿಶ್ಚಯಿಸಿ, ಅವನ ಹೀನಸ್ಥಿತಿಯನ್ನು ಕಂಡು ಮರುಗಿ, ಒಳ್ಳೆಯ ಸ್ಥಿತಿ ಯಲ್ಲಿರಬೇಕಾದವನು, ಇಂತಹ ಕೀಳುಪರಿಸ್ಥಿತಿಯಲ್ಲಿ ಬೇಡರ ಮಧ್ಯೆ ಇರುವ ನಲ್ಲಾ ಎಂದು ಮರುಗಿ, ಕುಮಾರನಿಗೆ ಸ್ನಾನಮಾಡಿಸುವುದು, ಒಳ್ಳೆಯ ಬಟ್ಟೆ ಕೊಡುವುದು, ಒಳ್ಳೆಯ ಮಾತುಗಳನ್ನು ಹೇಳುವುದು, ಕ್ಷತ್ರಿಯ ಕುಲಕ್ಕೆ ಯೋಗ್ಯವಾದ ದಾಕ್ಷಿಣ್ಯ, ಶಾಂತಸ್ವಭಾವ, ವೀರ್ಯ, ಧೈರ್ಯ ಇತ್ಯಾದಿ ಸದ್ಗುಣಗಳನ್ನು ಉಪದೇಶಮಾಡುವರು. ಹೀಗೆಲ್ಲ ಮಾಡಿ, ಕುಮಾರ ನನ್ನು ಸ್ವಲ್ಪಮಟ್ಟಿಗೆ ಪರಿಶುದ್ಧನನ್ನಾಗಿ ಮಾಡುವರು. ಅನಂತರ ರಾಜನ ಬಳಿಗೆ ಬಂದು, ಅವನು ಕಳೆದುಕೊಂಡಿದ್ದ ಕುಮಾರನು ದೊರಕಿರುವ ನೆಂದೂ, ಅವನು ಇಷ್ಟಪಟ್ಟರೆ ಕರೆದುತರುವುದಾಗಿ ರಾಜನಿಗೆ ತಿಳಿಸುವರು. ಹಾಗೆಯೇ ರಾಜಕುಮಾರನಿಗೂ ಅವನ ಉತ್ತಮ ವಂಶವನ್ನು ತಿಳಿಸಿ, ರಾಜನ ಬಳಿಗೆ ಕರೆದುತಂದು ಅವನಿಗೆ ಯುವರಾಜಪದವಿಯನ್ನು ಕೊಡಿ ಸುವರು. ತಂದೆಯೊಡನೆ ಕುಮಾರನು ಸುಖವಾಗಿರುಹುದೆಂಬ ಅಂಶವನ್ನು ತಿಳಿಸುವರು.

ಬೇಡರ ಜಾತ್ಯಭಿಮಾನವನ್ನು ಆರೋಪಿಸಿಕೊಂಡು ಹೀನ ಸ್ಥಿತಿ ಯಲ್ಲಿದ್ದ ರಾಜಕುಮಾರನಿಗೆ ಯುವರಾಜ ಪದವಿ ಕೊಡಿಸಿ, ರಾಜನಾದ ತಂದೆಯೊಡನೆ ಸುಖವಾಗಿರುವಂತೆ ಹೇಗೆ ಆಚಾರ್ಯರು ಕೃಪೆಮಾಡಿ ಅನು ಗ್ರಹಿಸಿದರೋ ಹಾಗೆಯೇ ಜೀವನು ದೇವನಲ್ಲ ತಿರ್ಯಗ್ಜಂತುವಲ್ಲ. ಅಚೇತನ ನಲ್ಲ ಜ್ಞಾನಾನಂದ ಮಯನು, ಪರಮಾತ್ಮನಿಗೆ ಪ್ರಿಯನಾದ, ದಾಸಭೂತ

ನಾದ ವಸ್ತುವು, ಎಂದು ಆಚಾರ್ಯರು ಜೀವನಿಗೆ ಉಪದೇಶಮಾಡುವರು. ಅಶಾಶ್ವತವೂ, ದುಃಖಕರವೂ ಆದ ಸಂಸಾರದಿಂದ ಬಿಡುಗಡೆ ಹೊಂದಿ, ಶಾಶ್ವತವಾದ ಮೋಕ್ಷಪಡೆಯಬಹುದೆಂದು ತಿಳಿಸುವರು. ಪರಮಪುರುಷನಲ್ಲಿ ಶರಣುಹೊಗಬೇಕೆಂಬ ಇಚ್ಛೆಯನ್ನು ಅವನಲ್ಲಿ ಉಂಟುಮಾಡುವರು. ಇಂತಹ ಶರಣಾಗತಿಯಿಂದ ಜೀವನಿಗೆ ಪರಮಾತ್ಮನ ಸೇವೆ ದೊರೆತು, ಅವನ ಮುಖೋಲ್ಲಾಸ ಪ್ರಾಪ್ತಿಯಾಯಿತೆಂಬ ತೃಪ್ತಿಯಾಗುವುದು. ತನಗೆ ಸೇರಿದವನು ತನ್ನ ಬಳಿಗೇ ಬಂದನಲ್ಲಾ ಎಂದು ಪರಮಾತ್ಮನಿಗೆ ಸಂತೋಷವಾಗುವುದು. ಹೀಗೆ ಜೀವನ ಉಜ್ಜೀವನ, ಪರಮಾತ್ಮನ ಮುಖೋಲ್ಲಾಸ ಎರಡೂ, ಈ ಪ್ರಪತ್ತಿ ವಿದ್ಯೆಯ ಪರಮ ಪ್ರಯೋಜನವೆಂದು ಗುರುಗಳು ತಿಳಿಸುವರು. ಇಂತಹ ಗುರುಗಳ ಕೃಪೆ ದೊರಕುವುದೂ ಕೂಡ ಒಂದು ಸುಕೃತ ವಿಶೇಷ.

## ಗುರುವಿನ ಅಗತ್ಯ

ಶ್ರುತಿ, ಸ್ಮೃತಿ, ಸೂತ್ರ, ಭಗವಚ್ಛಾಸ್ತ್ರಾದಿಗಳಿರುವಾಗ ಗುರುಗಳ ಅಗತ್ಯವೇಕೆ? ಇವುಗಳಿಂದ ತಿಳಿಯಬಹುದಲ್ಲಾ? ಎಂದರೆ, "ಶಾಸ್ತ್ರಜ್ಞಾನಂ ಬಹುಕ್ಲೇಶಂ ಬುದ್ಧೇಶ್ಚಲನಕಾರಣಂ। ಉಪದೇಶಾದ್ಧರಿಂ ಬುಧ್ವಾ ವಿರಮೇತ್ಸರ್ವ ಕರ್ಮಸು ।" ಎಂಬಂತೆ ಗ್ರಂಥಗಳಿಂದ ಸಮಂಜಸವಾದ ಅರ್ಥ ತಿಳಿಯುವುದು ಕಷ್ಟ. ಶಾಸ್ತ್ರಜ್ಞಾನದಲ್ಲಿ ಯಾವುದು ಉಪಾದೇಯ, ಯಾವುದು ತ್ಯಾಜ್ಯ ಎಂಬುದನ್ನು ನಿಶ್ಚಯಿಸುವುದೂ ಕಷ್ಟ. ಇವುಗಳ ಗುಣ, ಅವಗುಣ, ಉತ್ಕೃಷ್ಟ, ಅಪಕೃಷ್ಟಗಳು ವಿಶದವಾಗಿ ನಿರೂಪಿತವಾಗಿಲ್ಲದಿರಬಹುದು ಗ್ರಂಥಗಳಲ್ಲಿ. ಇವೆಲ್ಲವನ್ನು ಚೆನ್ನಾಗಿ ತಿಳಿಸಿ, ಅನುಮಾನವಿಲ್ಲದ ನಿಷ್ಕರ್ಷಾರ್ಥ ತಿಳಿಸುವುದಕ್ಕೆ ಗುರುಗಳು ಬೇಕು

ಗುರುಗಳು ಅಗತ್ಯ ಎಂದಾದಮೇಲೆ ಗ್ರಂಥಗಳ ಅಗತ್ಯವುಂಟೇ? ಎಂದರೆ ಉಂಟು. ಗ್ರಂಥಗಳಲ್ಲಿರುವ ವಿಷಯಗಳನ್ನು ಗುರುಗಳು ಸಂಗ್ರಹಿಸಿ, ತಿಳಿಯಾದ, ಮತ್ತು ಸುಲಭವಾದ ಅರ್ಥಗಳ ಮೂಲಕ ಮನದಟ್ಟು ಮಾಡುವರು. ಆದುದರಿಂದ, ಆಚಾರ್ಯರಂತೆ ಗ್ರಂಥಗಳೂ ಅಗತ್ಯ. ವೇದ, ಮತ್ತು ಶಾಸ್ತ್ರ ಅಗಾಧ; ಸಮುದ್ರ ಮಥನ ಕಾಲದಲ್ಲಿ ಅಸಾರವಾದ ಭಾಗವನ್ನು ಬಿಟ್ಟು, ಸಾರವಾದ ಅಮೃತವನ್ನು ಹೇಗೆ ಸಂಗ್ರಹಿಸ

ಲಾಯಿತೋ, ಹಾಗೆಯೇ ಪರಬ್ರಹ್ಮ ಪ್ರತಿಪಾದಕವಾದ ಶ್ರುತಿಯ ಸಾರವಾದ ಉಪನಿಷತ್ತೆಂಬ ಅಮೃತವನ್ನು ಸಾರತಮ ಭಾಗವೆಂದು ಸಂಗ್ರಹಿಸಲಾಗಿದೆ. ಇದು ಪರಬ್ರಹ್ಮ ಸ್ವರೂಪವನ್ನೂ ಅಮೃತತ್ತ್ವರೂಪವಾದ ಪರಮಾನಂದಕರವಾದ ಮೋಕ್ಷಪ್ರಾಪ್ತಿಮಾರ್ಗವನ್ನೂ ತಿಳಿಸುತ್ತದೆ. ಆದರೆ ಉಪನಿಷತ್ತುಗಳೂ ಅಪಾರವಾಗಿವೆ. ರಹಸ್ಯಾರ್ಥಗಳಿಲ್ಲಿವೂ ಇವುಗಳಲ್ಲಿ ತುಂಬಿವೆ ಸಮುದ್ರ ಮಥನ ಕಾಲದಲ್ಲಿ ಆವಿರ್ಭವಿಸಿದ ಮಹಾಲಕ್ಷ್ಮಿಯು ಪರಮಾತ್ಮನಿಗೆ ಪ್ರಿಯಳಾಗಿ ಹೇಗೆ ಸಾರತಮವಾದಳೋ, ಹಾಗೆಯೇ ಜೀವನು ಪರಮಾತ್ಮನಿಗೆ ತುಂಬಪ್ರಿಯತಮನು, ಎಂದು ಹೇಳುವ ಉಪನಿಷತ್ತಿನ ಭಾಗ ಸಾರತಮವಾದುದು.

ಇಂತಹ ಸಾರತಮಭಾಗಗಳನ್ನು ಗುರುಗಳು ರಕ್ಷಿಸಿಟ್ಟು ಜೀವನಿಗೆ ಅನುಗ್ರಹಿಸಿಕೊಡುವರು. ಈ ರಹಸ್ಯಾರ್ಥಗಳು ಪರನುಗ್ರಾಹ್ಯವಾದುವು. ಇವನ್ನು ಗುರುಗಳು ತಮ್ಮ ಜ್ಞಾನದೀವಿಗೆಯಿಂದ ಹುಡುಕಿ, ಸಂಗ್ರಹಿಸಿ, ಶ್ರೀಮನ್ನಾರಾಯಣನ ಪೀತಾಂಬರದ ಮರೆಯಲ್ಲಿರುವ ಮಹಾಲಕ್ಷ್ಮಿಯನ್ನು ಪೀತಾಂಬರ ಓರೆಮಾಡಿ ತೋರಿಸುವಂತೆ, ಆಚಾರ್ಯರು ಬಹು ಚೆನ್ನಾಗಿ ಪ್ರಕಾಶಪಡಿಸಿದ್ದಾರೆ. ಇಂತಹ ರಹಸ್ಯಗಳಲ್ಲಿ ಉತ್ತಮವಾದ ಶ್ರೀ ವೇದಾಂತ ದೇಶಿಕರ ರಹಸ್ಯತ್ರಯಸಾರ ಗ್ರಂಥದಲ್ಲಿ, ಮೋಕ್ಷಪ್ರಾಪ್ತಿಗೆ ಸರ್ವೋತ್ತಮವಾದ ಬ್ರಹ್ಮವಿದ್ಯೆ ಅಥವಾ ಪ್ರಪತ್ತಿಎಂಬ ವಿಶ್ವಧರ್ಮವನ್ನು ನಿರೂಪಿಸಿ, ವಿಶದೀಕರಿಸಿದ್ದಾರೆ. ಇಂತಹ ಪರಮೋಪಕಾರಕವಾದ ಮುಕ್ತಿಮಾರ್ಗವನ್ನು ತಿಳಿದು ಸರಿಯಾದ ಕ್ರಮದಲ್ಲಿ ಆಚರಿಸುವುದಕ್ಕೆ ಗುರುಗಳ ಸಹಾಯ, ಅನುಗ್ರಹ ಅಗತ್ಯ ಗುರುಗಳ ಕೃಪೆಯಿಲ್ಲದೆ, ಈ ಬ್ರಹ್ಮವಿದ್ಯೆಯನ್ನು ಆಚರಿಸಲಾಗುವುದಿಲ್ಲ.

## ಪ್ರಧಾನ ಪ್ರತಿತಂತ್ರ

"ತತ್ಸರ್ವಂ ವೈ ಹರೇಸ್ತನುಃ" ಎಂಬಂತೆ ಎಲ್ಲ ಚೇತನ, ಅಚೇತನ ವರ್ಗವೂ ಪರಮಾತ್ಮನಿಗೆ ಶರೀರ ಎಂದು ತಿಳಿಯುವುದು. ಶರೀರಕ್ಕೆ ಆತ್ಮವು ಹೇಗೋ ಹಾಗೆ ಪರಮಾತ್ಮನು ಇಡೀ ವಿಶ್ವಕ್ಕೆ ಆತ್ಮನು. ಹೀಗೆ ತಿಳಿಯುವುದೇ ಪ್ರತಿತಂತ್ರ. ಇದು ತಿಳಿದರೆ, ಶ್ರುತಿವಾಕ್ಯಗಳಿಗೆ ಸಮಂಜಸವಾದ

ಅರ್ಥಹೇಳಬಹುದು. ಜೀವನಿಗೆ ತನ್ನ ಸ್ವರೂಪ, ಸ್ಥಿತಿ, ಪ್ರವೃತ್ತಿಗಳ ಅರಿವುಂಟಾದರೆ ಪುರುಷಾರ್ಥ ಯಾವುದು ? ಪರಬ್ರಹ್ಮ ಸ್ವರೂಪ ಎಂತಹುದು? ಅವನನ್ನು ಹೊಂದಲು ಏನು ಮಾಡಬೇಕು? ಎಂಬ ವಿಚಾರಗಳಲ್ಲಿ ಆಸಕ್ತಿ ಹುಟ್ಟುವುದು. ಇವನ್ನು ತಿಳಿಯಲು ಅವನು ಪ್ರಯತ್ನಿಸುವನು. ಇಂತಹ ಪ್ರಧಾನ ಪ್ರತಿತಂತ್ರದ ಅರ್ಥ ತಿಳಿದರೆ, ಶ್ರುತಿಗಳಿಗೆ ಪರಸ್ಪರ ವಿರೋಧವಾದ ಅರ್ಥ ಬಾರದಂತೆ ಅರ್ಥಮಾಡಬಹುದು.

ಲೀಲಾವಿಭೂತಿಯಾದ ಪ್ರಪಂಚವೂ, ನಿತ್ಯವಿಭೂತಿಯಾದ ಪರಮಪದವೂ (ವೈಕುಂಠ) ಆದಿಕರ್ತೃವಾದ ಶ್ರೀಮನ್ನಾರಾಯಣನಿಗೆ ಶರೀರ. ಸಮಸ್ತ ವಿಶ್ವವೂ ಅವನಿಗೆ ಆಧಾರ. ಅವನಿಂದಲೇ ಸೃಷ್ಟಿಯಾಗಿರುವುದು ಅವನಿಗೇ ಶೇಷವಾಗಿರುವುದು. ಇದರಿಂದ ಇಡೀ ಜಗತ್ತು ಸ್ವಾಮಿಯ ಸ್ವರೂಪ, ಸಂಕಲ್ಪಗಳಿಗೆ ಅಧೀನ ಎಂದಾಯಿತು. ಹೀಗೆ ಜಗತ್ತಿನ ಸತ್ತೆ ಸ್ಥಿತಿ, ಪ್ರಯತ್ನಾದಿ ಫಲಗಳು ಪರಮಾತ್ಮನ ಅಧೀನವಾಗಿರುವುದರಿಂದ, ಆಧೇಯ, ವಿಧೇಯ, ಶೇಷತ್ವಾದಿಗಳು ಜಗತ್ತಿಗೆ ಪ್ರಾಪ್ತವಾಗುತ್ತವೆ. ಇದನ್ನು ಸಮರ್ಥನೆಮಾಡುವುದಕ್ಕೆ ಶ್ರುತಿ. ಸ್ಮೃತಿ, ಇತಿಹಾಸ ಪುರಾಣಗಳ ಪ್ರಮಾಣಗಳಿವೆ.

• ಇಚ್ಛಾತ ಏವ ತವ ವಿಶ್ವಪದಾರ್ಥಸತ್ತಾ
ನಿತ್ಯಂ ಪ್ರಿಯಾಸ್ತವ ತು ಕೇಚನ ತೇಹಿ ನಿತ್ಯಾಃ ।
ನಿತ್ಯಂ ತ್ವದೇಕ ಪರತಂತ್ರ ನಿಜಸ್ವರೂಪಾ-
ಭಾವತ್ಕಮಂಗಳ ಗುಣಾಹಿ ನಿದರ್ಶನಂ ನಃ ॥

ಜಗತ್ತಿನ ಪದಾರ್ಥಗಳಿಗೆಲ್ಲ ಸ್ವರೂಪಲಾಭವು ಪರಮಾತ್ಮನ ಸಂಕಲ್ಪದಿಂದಲೇ. ಅವುಗಳಲ್ಲಿ ಅವನಿಗೆ ಯಾವುವು ಪ್ರಿಯವೋ ಅವು ನಿತ್ಯವಾದವು ಮತ್ತು ಅವನಿಗೆ ಯಾವಾಗಲೂ ಅಧೀನವಾಗಿ ಸ್ವಕೀಯ ರೂಪಗಳುಳ್ಳವಾದುವು. ಇಂತಹ ಅವನ ಸಂಕಲ್ಪಕ್ಕೆ ಎಂದಿಗೂ ವ್ಯತ್ಯಾಸವಿಲ್ಲ. ಇದಕ್ಕೆ ಅವನ ಕಲ್ಯಾಣಗುಣಗಳೇ ನಿದರ್ಶನ. ಸರ್ವ ವಸ್ತುವೂ ಪರಮಾತ್ಮನ ಸಂಕಲ್ಪಾಧೀನ ಎಂಬುದು ನಾರಾಯಣ ಶಬ್ದದ ನಾರ ಪದದಿಂದ ಬೋಧಿತವಾಗುವುದು. ಸರ್ವ ವಸ್ತುಗಳ ಸ್ವರೂಪವು ಯಾವಾಗ ಈಶ

ರೇಚ್ಛೆಗೆ ಅಧೀನ ಎಂದಾಯಿತೋ ಅವುಗಳನ್ನು ಅನುಸರಿಸುವ ಸ್ಥಿತಿಯೂ ಈಶ್ವರಾಧೀನ ಎಂದಾಗುವುದು. ಹೀಗೆ ಸಮಸ್ತ ವಸ್ತುಗಳೂ, ಈಶ್ವರ ಸ್ವರೂಪವನ್ನು ಆಶ್ರಯಿಸಿ, ಅವನ ಸಂಕಲ್ಪಕ್ಕೆ ಅಧೀನವಾಗುತ್ತವೆ.

ಹಾಗೆಯೇ ಸರ್ವೇಶ್ವರನು ರಕ್ಷಕನು. ಜೀವನು ರಕ್ಷ್ಯವಸ್ತುವು. ಜೀವನ ರಕ್ಷಣದಲ್ಲಿ ಈಶ್ವರನು ಸ್ವರೂಪಯೋಗ್ಯತೆ ಹೊಂದಿ ಸರ್ವ ಶಕ್ತನಾಗಿದ್ದಾನೆ. ಜೀವನಿಗೆ ಸ್ವಾಮಿಯ ಅಧೀನವಾದ ಪ್ರವೃತ್ತಿಬಿಟ್ಟರೆ, ತಾನು ರಕ್ಷಿಸಿಕೊಳ್ಳುವ ಯೋಗ್ಯತೆಯಾಗಲಿ ಶಕ್ತಿಯಾಗಲಿ ಇಲ್ಲ. ಈಶ್ವರನು ಹೀಗೆ ನಿರುಪಾಧಿಕ ಶೇಷಿ ಮತ್ತು ನಿರುಪಾಧಿಕ ನಿಯಾಮ್ಯನಾಗಿರುವುದು. ಈ ರಕ್ಷಕ ರಕ್ಷ್ಯಸಂಬಂಧಕ್ಕೆ ಮುಖ್ಯ ಕಾರಣವಾಗಿದೆ.

ತದಹಂ ತ್ವದೃತೇನ ನಾಥವಾನ್ ಮದೃತೇ ತ್ವಂ ದಯನೀಯವಾನ್ನ ಚ।
ವಿಧಿನಿರ್ಮಿತಮೇತದನ್ವಯಂ ಭಗವನ್ ! ಪಾಲಯ ಮಾಸ್ಮ ಜೀಹಪಃ।

ಎಂದು ಯಾಮುನ ಮುನಿಗಳು ಹೇಳಿದ್ದಾರೆ.

"ಹೇ ದೇವಾ ! ನನಗೆ ನಿನ್ನನ್ನು ಬಿಟ್ಟರೆ ರಕ್ಷಿಸತಕ್ಕ ಸ್ವಾಮಿ ಇನ್ನ್ಯಾರೂ ಇಲ್ಲ. ನಿನಗೆ ನನ್ನನ್ನು ಬಿಟ್ಟರೆ ದಯೆಗೆ ಪಾತ್ರನಾದ ರಕ್ಷ್ಯನಾರೂ ಇಲ್ಲ. ಹೀಗೆ ಏರ್ಪಟ್ಟಿರುವ ಸಂಬಂಧವನ್ನು ಹೇ ! ಷಾಡ್ಗುಣ್ಯ ಪರಿಪೂರ್ಣನಾದ ಪರಮಾತ್ಮನೇ ! ತ್ಯಜಿಸದೆ ಕಾಪಾಡು.

## ಅರ್ಥ ಪಂಚಕ

ಚಿತ್, ಅಚಿತ್ ರೂಪವಾದ ಜಗತ್ತಿಗೂ, ಸರ್ವೇಶ್ವರನಿಗೂ ಶರೀರಾತ್ಮವನ್ನು ಬೋಧಿಸುವುದು ಪ್ರತಿತಂತ್ರ ಎಂದು ಸ್ಥಾಪಿಸಿದಮೇಲೆ ಮೋಕ್ಷಾರ್ಥಿಯು ಅರ್ಥಪಂಚಕ ಏನೆಂಬುದನ್ನು ತಿಳಿಯಬೇಕು. ಅರ್ಥ ಪಂಚಕ ಯಾವುದೆಂದರೆ ಜೀವನು ಹೊಂದಬೇಕಾದ ಪ್ರಾಪ್ಯದ ಸ್ವರೂಪ, ಅಥವಾ ಉಪಾಯದ ಸ್ವರೂಪ, ಪರಮಾತ್ಮನನ್ನು ಪಡೆಯಬೇಕೆಂದು ಪ್ರಯತ್ನಿಸುವ ಜೀವಾತ್ಮನ ಸ್ವರೂಪ, ಪರಮಾತ್ಮನನ್ನು ಹೊಂದಲು ಉಪಾಯವಾದ ಸಿದ್ಧೋಪಾಯ ಮತ್ತು ಸಾಧ್ಯೋಪಾಯ, ನಿತ್ಯವಿಭೂತಿ

ಯಲ್ಲಿ ಮೋಕ್ಷ ಸಾಮ್ರಾಜ್ಯ ಪಡೆದು ಅನುಭವಿಸುವ ಕೈಂಕರ್ಯ ಪ್ರಾಪ್ತಿ, ಮತ್ತು ಇಂತಹ ಫಲಪ್ರಾಪ್ತಿಗೆ ಇರುವ ವಿರೋಧಿಸ್ವರೂಪ, ಈ ಐದು ವಿಷಯಗಳನ್ನು ತಿಳಿಯುವುದೇ ಅರ್ಥಪಂಚಕ ಎನ್ನಿಸಿಕೊಳ್ಳುವುದು. ಎಲ್ಲ ಶ್ರುತಿ ಸ್ಮೃತಿ, ಪುರಾಣ, ಇತಿಹಾಸಗಳು ಇವನ್ನು ಪ್ರತಿಪಾದಿಸುತ್ತವೆ. ಈ ಐದು ಅರ್ಥಗಳನ್ನು ರಹಸ್ಯತ್ರಯಗಳಲ್ಲಿ ತಿಳಿಯಬಹುದು. ರಹಸ್ಯ ತ್ರಯ ಎಂದರೆ ಮೂಲಮಂತ್ರ, ದ್ವಯ ಮತ್ತು ಚರಮಶ್ಲೋಕ. ಇವು ವ್ಯಾಪಕ ಮಂತ್ರಗಳು.

ಅರ್ಥಪಂಚಕದ ಸ್ವರೂಪವನ್ನ ಹೀಗೆ ಸಂಗ್ರಹಿಸಬಹುದು. ಲಕ್ಷ್ಮೀ ಪತಿಯಾಗಿರುವ ಶ್ರೀಮನ್ನಾರಾಯಣನೇ ಪ್ರಾಪ್ಯನು. ಜೀವಾತ್ಮನು ಅನನ್ಯಗತಿಕನಾಗಿ, ಅನನ್ಯಾರ್ಹ ಪ್ರಿಯದಾಸನಾಗಿ, ಪ್ರಪನ್ನನಾಗುವುದರಿಂದ ಪ್ರಾಪ್ತೃವು. ಪರಿಪೂರ್ಣ ಬ್ರಹ್ಮಾನುಭವವು ನಿತ್ಯಸೂರಿಗಳ ಹಾಗೆ ಜೀವನಿಗೂ ಪಿತ್ರಾರ್ಜಿತ ದಾಯಭಾಗದಂತೆ ತಾನಾಗಿಯೇ ಉಂಟಾಗುವುದು. ಇಂತಹ ಸ್ವತಃ ಸಿದ್ಧವಾದ ಪ್ರಾಪ್ತಿಯನ್ನು ಜೀವನು ತನ್ನ ದುಷ್ಕರ್ಮ ಪರಿಪಾಕದಿಂದ ಉಂಟಾದ ಅಜ್ಞಾನಕ್ಕೆ ತುತ್ತಾಗಿ, ಸ್ವತಃ ಅಪರಾಧಿಯಾಗಿ ಅಹಂಕಾರದಿಂದ ಕಳೆದುಕೊಂಡನು. ಇದು ತುಂಬ ಖೇದಕರ. ಇಂತಹ ದುರ್ದೆಶೆಗೆ ಬಂದರೂ, ಪರಮಾತ್ಮನನ್ನು ಹೊಂದುವ ಉಪಾಯ ಅವಶಿಸಿದೆ. ಅದು ಯಾವುದೆಂದರೆ, ಶ್ರೀ ಲಕ್ಷ್ಮೀನಾರಾಯಣನಲ್ಲಿ ಶರಣಾಗತಿ ಮಾಡುವುದು.

## ತತ್ವತ್ರಯ

ಪ್ರಪತ್ತಿನಿಷ್ಠನು ತತ್ವತ್ರಯ ಏನೆಂಬುದನ್ನು ಅಗತ್ಯವಾಗಿ ತಿಳಿಯಬೇಕು. ಏಕೆಂದರೆ ಭ್ರಮರೂಪವಾದ ಅಜ್ಞಾನವೆಲ್ಲವೂ ಇದರಿಂದ ನಾಶವಾಗುವುದು. ಚಿತ್ತು, ಅಚಿತ್ತು, ಈಶ್ವರ—ಈ ಮೂರೂ ತತ್ವತ್ರಯಗಳು. ಇವುಗಳ ಸ್ವರೂಪವನ್ನು ತಿಳಿಯುವುದರಿಂದ, ಪ್ರಾಪ್ಯನಾದ ಈಶ್ವರತ್ವವೂ, ಪ್ರಾಪ್ತಾವಾದ ಜೀವತತ್ವವೂ ಪ್ರಾಪ್ತಿ ವಿರೋಧಿಯಲ್ಲಿ ಸೇರಿದ ಪ್ರಕೃತಿಸಂಬಂಧವಾದ ಅಚೇತನ ತತ್ವವೂ ಗೊತ್ತಾಗುವುದು.

ಅಚೇತನವು ಪ್ರಕೃತಿ, ಕಾಲ, ಶುದ್ಧಸತ್ವ ಎಂದು ಮೂರು ವಿಧ.

ಪ್ರಕೃತಿಯು ಇಪ್ಪತ್ತನಾಲ್ಕು ವಿಧಗಳಾಗಿವೆ. ಇವೆಲ್ಲ ಪ್ರಕೃತಿಯ ವಿಕಾರ ವಾಗಿ ಅದರಲ್ಲಿಯೇ ಅಂತರ್ಗತವಾಗಿವೆ. ಜೀವಾತ್ಮರಲ್ಲಿ ನಿತ್ಯರು, ಮುಕ್ತರು ಬದ್ಧರು ಎಂದು ಮೂರು ವಿಧ. ಈ ಮೂವರನ್ನೂ ಚೇತನರೆಂದೇ ಹೇಳ ಲಾಗಿದೆ. ಪರಮಾತ್ಮನೂ ಚೇತನನೇ. ಹಾಗಾದರೆ, ಚೇತನ, ಅಚೇತನ ಎಂದು ತತ್ವದ್ವಯ ಹೇಳಿದರೆ ಸಾಲದೇ? ಪರಮಾತ್ಮನು ಜೀವನಂತೆ ಭೋಕ್ತಾ. ಆದುದರಿಂದ, ತತ್ವದ್ವಯ ಹೇಳುವುದು ನ್ಯಾಯುವಲ್ಲವೇ? ಎಂದರೆ ಹಾಗೆ ಹೇಳುವುದು ಸರಿಯಲ್ಲ. ಏಕೆಂದರೆ, ಈಶ್ವರನು ಜಗ ದ್ವ್ಯಾಪಾರವುಳ್ಳ ಸರ್ವನಿಯಂತಾ ಜೀವನಿಗೆ ಜಗದ್ವ್ಯಾಪಾರ ಎಂಬುದಿಲ್ಲ. ಈಶ್ವರನು ಸರ್ವಸ್ವತಂತ್ರನು. ಜೀವನು ಪರತಂತ್ರನು. ಈಶ್ವರನು ಕರ್ಮ ವಶ್ಯನಲ್ಲ. ಜೀವನು ಕರ್ಮವಶ್ಯನು. ಈಶ್ವರನು ಸಮಸ್ತ ಕಲ್ಯಾಣ ಗುಣಾಕರನು. ಜೀವನು ಬದ್ಧದೆಶೆಯಲ್ಲಿ ಹೇಯುಗುಣ ಪರಿಪೂರ್ಣನು. ಹೀಗೆ ಅನೇಕ ವ್ಯತ್ಯಾಸಗಳಿರುವುದರಿಂದ ತತ್ವತ್ರಯ ವಿಭಾಗವೇ ಸರಿ.

ಸರ್ವೇಶ್ವರನು ಜೀವತತ್ವವನ್ನು ಶರೀರವಾಗಿ ಧರಿಸಿರುವನು. ಯಾವ ಯಾವ ತತ್ವಗಳನ್ನು ಯಾವ ಯಾವ ಭೂಷಣವನ್ನಾಗಿ ಪರಮಾತ್ಮನು ಅರ್ಚಾವತಾರದಲ್ಲಿ ಧರಿಸಿ ತನ್ನ ಸೌಲಭ್ಯಾತಿಶಯದಿಂದ ಜೀವಾತ್ಮರಿಗೆ ದರ್ಶನಕೊಡುತ್ತಾನೆಂಬುದನ್ನು ಇಲ್ಲಿ ಉಪಪಾದಿಸಲಾಗಿದೆ. ಪರಮಾತ್ಮನು ಜೀವನನ್ನು ಕೌಸ್ತುಭಮಣಿಯ ರೂಪದಲ್ಲಿ ಧರಿಸಿರುವನು. ಮೂಲ ಪ್ರಕೃತಿಯನ್ನು ಶ್ರೀವತ್ಸವೆಂಬ ಮಚ್ಚೆಯಾಗಿ ಹೊಂದಿರುವನು. ಮಹ ತ್ತತ್ವವೆಂಬ ಬುದ್ಧಿಯನ್ನು ಗದೆಯಾಗಿಯೂ, ಜ್ಞಾನ ಅಜ್ಞಾನಗಳನ್ನು ನಂದಕವೆಂಬ ಕತ್ತಿ, ಅದರ ಒರೆಯನ್ನಾಗಿಯೂ, ಮನಸ್ಸೆಂಬ ತತ್ವವನ್ನು ಚಕ್ರವನ್ನಾಗಿಯೂ ಧರಿಸಿರುವನು. ಹತ್ತು ಇಂದ್ರಿಯಗಳನ್ನು ಬಾಣ ಗಳನ್ನಾಗಿಯೂ, ಸ್ಥೂಲ ಸೂಕ್ಷ್ಮಭೂತಗಳನ್ನು ವೈಜಯಂತಿಮಾಲೆಯ ನ್ನಾಗಿ ಧರಿಸಿದ್ದಾನೆ. ಹೀಗೆ ತತ್ವಗಳೆಲ್ಲವನ್ನೂ ಈ ರೂಪಗಳಲ್ಲಿ ಧರಿಸಿ ಗರುಡನನ್ನೇ ವಾಹನವನ್ನಾಗುಳ್ಳ, ವೇದ ಪ್ರತಿಪಾದ್ಯನಾದ ಶ್ರೀಕೃಷ್ಣನು ವರದರಾಜ ರೂಪಿಯಾಗಿ, ಹಸ್ತಿಗಿರಿಯಲ್ಲಿ ರಕ್ಷ್ಯ ರಕ್ಷಕ ಭಾವವನ್ನು ಅವಲಂಬಿಸಿ ನಿಂತಿರುವನು. ಹೇಗೆ ರಕ್ಷಿಸುವನೆಂದರೆ, ಅನಿಷ್ಟ ನಿವೃತ್ತಿ ಇಷ್ಟಪ್ರಾಪ್ತಿಯನ್ನುಂಟು ಮಾಡಿ, ರಕ್ಷಿಸುತ್ತಾನೆಂದು ನಿರೂಪಿಸಲಾಗಿದೆ

ಇಲ್ಲಿ ಮುಖ್ಯವಾಗಿ ತಿಳಿಯಬೇಕಾದ ವಿಷಯವೆಂದರೆ ಪಾಂಚರಾತ್ರಾದಿ ಆಗಮ ಶಾಸ್ತ್ರಪ್ರಕಾರ, ಪ್ರತಿಷ್ಠೆಯಾದ ಭಗವಂತನ ದಿವ್ಯಮಂಗಳ ವಿಗ್ರಹವಲ್ಲಿ, ಸಂಸ್ಕಾರ ಮಹಿಮೆಯಿಂದ ವಿಗ್ರಹವು ಹೇಗಿವೆಯೋ ಹಾಗೆಯೇ ಪರಮಾತ್ಮನು ದಿವ್ಯಮಂಗಳ ವಿಗ್ರಹಯುಕ್ತನಾಗಿ, ಅದರಲ್ಲಿ ತಾನು ಪ್ರವೇಶಮಾಡಿ, ಸಕಲರಿಗೂ ದರ್ಶನಕೊಡುವನು. ಹೀಗೆ ದರ್ಶನ ಕೊಡುವಾಗ ಶಂಖ, ಚಕ್ರ, ಗದಾದಿ ಅಸ್ತ್ರ ಭೂಷಣ ಯುಕ್ತನಾಗಿರುವನು ಇದರಿಂದ ಅವನು ಸಮಸ್ತ ಚಿದಚಿತ್ತುಗಳೊಡನೆ ಸೇರಿರುವ ಭಾವವನ್ನೂ, ಅವೆಲ್ಲಕ್ಕೂ ತಾನೇ ಅಭಿಮಾನ ದೇವತೆ ಎಂಬುದನ್ನೂ ತೋರ್ಪಡಿಸುವನು.

ಶ್ರೀರಂಗರಾಜಸ್ತವದ ಒಂದು ಶ್ಲೋಕದಲ್ಲಿ ಇದು ಚೆನ್ನಾಗಿ ವಿವರಿಸಲ್ಪಟ್ಟಿದೆ.

ಷಾಡ್ಗುಣ್ಯಾದ್ವಾಸುದೇವಃ ಪರ ಇತಿ ಸಭವಾನ್ ಮುಕ್ತಭೋಗ್ಯೋ ಬಲಾಢ್ಯಾತ್ ಬೋಧಾತ್ಸಂಕರ್ಷಣಸ್ತ್ವಂ ಹರಸಿ ವಿತನುಷೇ ಶಾಸ್ತ್ರ ಮೈಶ್ವರ್ಯ ವೀರ್ಯಾತ್ । ಪ್ರದ್ಯುಮ್ನಸ್ಸರ್ಗಧರ್ಮೌ ನಯಸಿ ಚ ಭಗವನ್ ! ಶಕ್ತಿತೇಜೋನಿರುದ್ಧೋ, ಬಿಭ್ರಾಣಃ ಪಾಸಿ ತತ್ವಂ ಗಮಯಸಿ ಚ ತಥಾ ವ್ಯೂಹ್ಯ ರಂಗಾಧಿರಾಜ ॥

ಹೇ ! ರಂಗನಾಥಸ್ವಾಮಿಯೇ, ಆರು ಗುಣಗಳಿಂದ ವಾಸುದೇವ ನೆನಿಸಿ, ಪರರೂಪಮಾಡಿ ಪರವಾಸುದೇವನಾಗಿ ಮುಕ್ತರಿಗೆ ಭೋಗ್ಯಭೂತನಾಗಿರುವೆ. ಜ್ಞಾನ ಬಲ ಎಂಬ ಎರಡು ಗುಣಗಳಿಂದ ವ್ಯೂಹಾವತಾರಿಯಾಗಿ ಸಂಕರ್ಷಣನೆನಿಸಿ ಜಗತ್ತನ್ನೆಲ್ಲಾ ಸಂಹರಿಸುವೆ. ಅಂದರೆ ಪ್ರಳಯವನ್ನುಂಟುಮಾಡುವೆ. ಐಶ್ವರ್ಯ, ವೀರ್ಯ ಗುಣಗಳಿಂದ ಪ್ರದ್ಯುಮ್ನನೆನಿಸಿ ಜಗತ್ಸೃಷ್ಟಿಮಾಡಿ ಧರ್ಮ ಪ್ರವರ್ತನೆ ಮಾಡುವೆ. ಹಾಗೆಯೇ ಶಕ್ತಿ ತೇಜೋಗುಣಗಳನ್ನು ಹೊಂದಿ ಅನಿರುದ್ಧಾವತಾರಿಯಾಗಿ ಜಗದ್ರಕ್ಷಕನಾಗಿ ತತ್ವವನ್ನು ಬೋಧಿಸುವೆ. ಅರ್ಚಾವತಾರದಲ್ಲಿ ಆಗಮಶಾಸ್ತ್ರಪ್ರಕಾರ ಸರ್ವೇಶ್ವರನ ದಿವ್ಯಮಂಗಳ ವಿಗ್ರಹವು, ಆ ಬಿಂಬಾಕೃತಿಯನ್ನೇ ಹೊಂದಿ, ಭಕ್ತರ ಮನೋರಥಪೂರ್ತಿಗಾಗಿ, ಆ ವೈಕುಂಠನಾಥನೇ, ಆ ಬಿಂಬಗಳಲ್ಲಿರುವನೆಂದು ಸಾತ್ವತಸಂಹಿತೆ ತಿಳಿಸುತ್ತದೆ. ಉಪಾಸನೆಗೆ ಭಗವದ್ರೂಪವು

ಅಗತ್ಯ. ಮೂವತ್ತೆರಡು ವಿದ್ಯೆಗಳಲ್ಲಿ ಭಗವದ್ರೂಪವು ಉಪಾಸನಕ್ಕೆ ವಿಧಿಸಲ್ಪಟ್ಟಿದೆ.

ಪರಮಾತ್ಮನು ಕರ್ಮಭೂಮಿಯಲ್ಲಿ ಅವತಾರಮಾಡಿದರೂ, ಕರ್ಮವಶ್ಯನಲ್ಲ. ಅವನಿಗೆ ಜ್ಞಾನಸಂಕೋಚವಿಲ್ಲ. ಅವನು ಅವತರಿಸುವುದಕ್ಕೆ ಅವನ ಸಂಕಲ್ಪವೇ ಕಾರಣ. ಧರ್ಮವನ್ನು ರಕ್ಷಿಸಬೇಕಾದ ಕಾಲವೇ ಅವತಾರಕಾಲ ಈ ಅವತಾರಗಳಿಗೆ ಸಾಧುಪರಿತ್ರಾಣವೇ ಪ್ರಯೋಜನ. ಈ ಅವತಾರ ರಹಸ್ಯಗಳನ್ನು ತಿಳಿದು ಅನುಸಂಧಾನ ಮಾಡುವವರಿಗೆ, ಅವರವರ ಅಧಿಕಾರಾನುಗುಣವಾಗಿ, ಭಕ್ತಿಮಾರ್ಗದಲ್ಲಿಯಾಗಲಿ, ಪ್ರಪತ್ತಿಮಾರ್ಗದಲ್ಲಿಯಾಗಲಿ, ಪ್ರವೃತ್ತಿಯುಂಟಾಗಿ, ಪುನರ್ಜನ್ಮವಿಲ್ಲದೆ ಮುಕ್ತಿ ದೊರೆಯುವುದು.

ಇಂತಹ ತತ್ವತ್ರಯದ ಸ್ವರೂಪ, ಸ್ಥಿತಿ, ಪ್ರವೃತ್ತಿ ಕಥನವು ಪರಿಪೂರ್ಣವಾಗಬೇಕಾದರೆ, ಲಕ್ಷ್ಮಿಯ ಸ್ವರೂಪ, ಸ್ಥಿತಿ, ಪ್ರವೃತ್ತಿಕಥನ ಅಗತ್ಯ. ಪರತತ್ವವಾದ ನಾರಾಯಣನಿಗೆ ಯಾವ ಸ್ವರೂಪ, ಸ್ಥಿತಿ, ಪ್ರವೃತ್ತಿ ಹೇಳಲ್ಪಟ್ಟಿವೆಯೋ ಅವೆಲ್ಲವೂ ಲೋಕನಾಯಕಿಯಾದ ಲೋಕೇಶ್ವರಿಗೂ ಉಂಟೆಂದು ತಿಳಿಯಬೇಕು. ಈ ವಿಷಯವನ್ನು ಸಪ್ರಮಾಣವಾಗಿ ಸ್ಥಾಪಿಸಲಾಗಿದೆ. ಲಕ್ಷ್ಮೀತತ್ವನಿರ್ಣಯವು ಶ್ರುತಿ, ಸ್ಮೃತಿ, ಪುರಾಣ, ಇತಿಹಾಸ ಆಳ್ವಾರಾಚಾರ್ಯರ ಶ್ರೀಸೂಕ್ತಿಗಳಲ್ಲಿ ನಿರೂಪಿತವಾಗಿದೆ.

ಲಕ್ಷ್ಮೀನಾರಾಯಣರಿಗೆ ಹೀಗೆ ಸರ್ವ ಅವಸ್ಥೆಯಲ್ಲಿ ನಿತ್ಯ ಯೋಗವಿದ್ದರೂ ಗುಣ, ವಿಭೂತಿ, ವ್ಯಾಪಾರಗಳಲ್ಲಿ ವ್ಯತ್ಯಾಸವುಂಟೆಂದು ಶಾಸ್ತ್ರಗಳು ತಿಳಿಸುತ್ತವೆ. ಇದರಿಂದ ಈಶ್ವರ ಭಾವಕ್ಕೆ ಹಾನಿ ಇಲ್ಲ ಎಲ್ಲಗುಣ ವಿಭೂತಿ ವ್ಯಾಪಾರಗಳಲ್ಲಿ ಇಬ್ಬರಿಗೂ ಅನ್ವಯವಿದ್ದರೂ, ತಾವಾಗಿಯೇ ಇವನ್ನು ವಿಭಾಗಿಸಿಕೊಂಡಿದ್ದಾರೆ. ದಂಡಧರತ್ವಾದಿಗಳು ಪರಮಾತ್ಮನಿಗೂ ಪುರುಷಕಾರತ್ವಾದಿಗಳು ಮಹಾಲಕ್ಷ್ಮಿಗೂ ಅನ್ವಯವಾಗುವಂತೆ ಅವರಾಗಿ ಇಷ್ಟಪಟ್ಟು ಹಂಚಿಕೊಂಡ ವ್ಯಾಪಾರ. ಇದರಿಂದ ಭಕ್ತರನ್ನು ಅನುಗ್ರಹಿಸುವ ವ್ಯಾಪಾರ ಸ್ವಾಮಿಗಿಲ್ಲವೆಂದೂ ತಪ್ಪುಮಾಡಿದವರನ್ನು ಶಿಕ್ಷಿಸುವ ಯೋಗ್ಯತೆ ಲಕ್ಷ್ಮಿಗಿಲ್ಲವೆಂದೂ ತಿಳಿಯಕೂಡದು. ಎರಡು ವಿಧ ವ್ಯಾಪಾರಗಳಲ್ಲಿ ಇಬ್ಬರಿಗೂ ಶಕ್ತಿಯುಂಟು. ಆದರೆ ಸರ್ವೇಶ್ವರನು ತನಗೆ ಅರ್ಹವಾದ

ವ್ಯಾಪಾರವನ್ನೂ, ಶ್ರೀಯು ತನಗೆ ಅರ್ಹವಾದುದನ್ನೂ ತಾವಾಗಿಯೇ ಇಷ್ಟಪಟ್ಟು ವಹಿಸಿಕೊಂಡಿದ್ದಾರೆ. ಲೋಕದಲ್ಲಿ ರಾಜನೂ, ರಾಣಿಯೂ, ತನುತಮಗೆ ಯೋಗ್ಯವಾದ ಉಡುಪು, ಆಭರಣ, ಆಧಿಪತ್ಯ, ವ್ಯಾಪಾರ ಗಳನ್ನು ಹೇಗೆ ವಿಭಾಗಿಸಿಕೊಂಡಿದ್ದಾರೋ ಹಾಗೆ ಎಂದು ಭಾವಿಸಬೇಕು. ರಾಜಪತ್ನಿಗೆ ಆಡಳಿತದಲ್ಲಿ ಅನ್ವಯವಿಲ್ಲವಲ್ಲಾ ಎಂದರೆ ರೀಜೆಂಟಾಗಿ ಕೆಲಸಮಾಡಿದಾಗ, ಅನ್ವಯವಿದೆಯಲ್ಲವೇ ?

ಮೇಲಿನ ಅಭಿಪ್ರಾಯವನ್ನು ಶ್ರೀ ಪರಾಶರಭಟ್ಟರು, ಶ್ರೀಗುಣರತ್ನ ಕೋಶದ ಒಂದು ಶ್ಲೋಕವಲ್ಲಿ ಚೆನ್ನಾಗಿ ತಿಳಿಸಿದ್ದಾರೆ.

ಯುವತ್ವಾದೌ ತುಲ್ಯೇಪ್ಯಪರವಶತಾಶತ್ರುಶಮನ
ಸ್ಥಿರತ್ವಾದೀನ್ ಕೃತ್ವಾ ಭಗವತಿ ಗುಣಾನ್ ಪುಂಸ್ತ್ವಸುಲಭಾತ್ ।
ತ್ವಯಿ ಸ್ತ್ರೀತ್ವೈಕಾನ್ತಾನ್ ಮೃದಿಮಪತಿಪಾರಾರ್ಥ್ಯಕರುಣಾನ್
ಕ್ಷಮಾದೀನ್ವಾ ಭೋಕ್ತುಂ ಭವತಿ ಯುವಯೋರಾತ್ಮನಿಭಿಧಾ ॥

ಸೌಂದರ್ಯ, ಲಾವಣ್ಯ, ಜ್ಞಾನ, ಶಕ್ತಿ, ಯೌವನಾದಿ ಅನಂತಗುಣಾ ಕರತ್ವದಲ್ಲಿ ಇಬ್ಬರೂ ಸಮನಾದರೂ, ಪುರುಷರೂಪಕ್ಕೆ ಯೋಗ್ಯವಾದ, ಇನ್ನೊಬ್ಬರಿಗೆ ವಶವಾಗದಿರುವಿಕೆ, ಶತ್ರುನಿರಸನ, ಸ್ಥಿರತ್ವ, ಕಲ್ಯಾಣಗುಣಾ ಕರತ್ವ, ಹೇಯ, ಪ್ರತ್ಯನೀಕತ್ವ ಇತ್ಯಾದಿ ವಿಶೇಷ ಗುಣಗಳು ಸರ್ವೇಶ್ವರ ನಲ್ಲಿರುವಂತೆಯೂ, ಸ್ತ್ರೀಧರ್ಮಕ್ಕೆ ಸಹಜವಾದ ಮೃದುತ್ವ, ಪತಿಪಾರತಂತ್ರ್ಯ, ದಯೆ, ಕ್ಷಮೆ, ವಾತ್ಸಲ್ಯಾದಿ ಗುಣಗಳು ಲಕ್ಷ್ಮಿಯಲ್ಲಿರುವಂತೆಯೂ ನೀವು ಗಳೇ ಮಾಡಿಕೊಂಡ ಇಂತಹ ವ್ಯತ್ಯಾಸವು ನಿತ್ಯಮುಕ್ತ ಭೋಗ್ಯವಾಗಿ ಅನಾದಿಯಾಗಿ ಬಂದಿರುವುದು.

ಶಾಸ್ತ್ರ ಪ್ರಮಾಣಗಳಿಂದ ತತ್ವಾರ್ಥ ನಿಶ್ಚಯಮಾಡುವುದಕ್ಕೆ ಯಾವಾಗ ಯೋಗ್ಯತೆ ಇಲ್ಲವೋ ಆಗ ಪ್ರಮಾಣ ಶರಣರಾಗಿರುವ ಆಚಾರ್ಯ ರನ್ನು ಆಶ್ರಯಿಸಿ ಅವರ ಉಪದೇಶ ಪಡೆದು ಕೃತಕೃತ್ಯರಾಗುವುದು ಉತ್ತಮ. ಇದಕ್ಕಾಗಿ ಶಾಸ್ತ್ರಜ್ಞಾನ ಪಡೆಯಬೇಕೆಂದು ಹೋಗುವುದು ಕ್ಲೇಶಕರ. ಪೂರ್ವಾಚಾರ್ಯರು ಬಹು ಕೃಪೆಯಿಂದ ತತ್ವತ್ರಯದ ಸ್ವರೂಪ ಸ್ಥಿತಿ, ಪ್ರವೃತ್ತಿಗಳನ್ನು ವಿಶದವಾಗಿ ಉಪದೇಶಮಾಡಿದ್ದಾರೆ. ಅವುಗಳಿಂದ

ದೇಹಾತ್ಮ ಭ್ರಮೆ, ಸ್ವತಂತ್ರಾತ್ಮ ಭ್ರಾಂತಿ, ಜೀವೇಶ್ವರ ಭ್ರಾಂತಿ, ನಿರೀಶ್ವರ ಭ್ರಾಂತಿ ಎಲ್ಲವೂ ಮಾಯವಾಗುತ್ತವೆ.

## ಪರದೇವತೆ ಯಾರು?

ಸಾರಾಸಾರ ವಿವೇಕರೂಪ ನಿಪುಣತೆ ಇಲ್ಲದ ಅಭಿಪ್ರಾಯಗಳನ್ನು ಜ್ಞಾನಿಗಳು ಅಂಗೀಕರಿಸುವುದಿಲ್ಲ. ಅಂತಹ ಅಭಿಪ್ರಾಯಗಳು ಯಾವುವೆಂದರೆ—ಆತ್ಮವು ಪರಮಾತ್ಮನಲ್ಲಿ ಐಕ್ಯ ಎಂಬ ಭಾವನೆ. ರುದ್ರ, ಇಂದ್ರ, ಅಗ್ನಿ-ಎಲ್ಲರೂ ಒಂದೇ ಎಂಬ ಭಾವನೆ. ಬ್ರಹ್ಮ, ವಿಷ್ಣು, ಶಿವ-ಎಲ್ಲರೂ ಸಮರು ಎಂದು ತಿಳಿಯುವುದು. ಇವರು ಸ್ವರೂಪೈಕ್ಯ ಹೊಂದಿದ್ದಾರೆ ಎಂಬ ಭಾವನೆ. ಹಾಗಾದರೆ ಜ್ಞಾನಿಗಳು ಇನ್ಯಾರನ್ನು ಅಂಗೀಕರಿಸಿದ್ದಾರೆ? ಅದಕ್ಕೆ ಪ್ರಮಾಣಗಳುಂಟೋ ? ಎಂದರೆ ಉಂಟು. ವೇದ, ವೇದಾಂತಗಳು ಸರ್ವಸಮಂಜಸವಾದುವು ಎಂಬುದನ್ನು ಎಲ್ಲರೂ ಅಂಗೀಕರಿಸಿದ್ದಾರೆ. ಮನು, ವ್ಯಾಸ, ಪರಾಶರ, ಶುಕ, ವಾಲ್ಮೀಕಾದಿಗಳು ಪರಮಾತ್ಮ ಸ್ವರೂಪವನ್ನು ತಮ್ಮ ಉಕ್ತಿಗಳಿಂದ ತಿಳಿಸಿದ್ದಾರೆ ಉಪನಿಷತ್ತು, ಪುರುಷಸೂಕ್ತ, ವಿಷ್ಣುಪುರಾಣ, ಭಗವದ್ಗೀತೆ, ಭಾಗವತ, ಮನುಸ್ಮೃತಿ-ಇತ್ಯಾದಿ ಗ್ರಂಥಗಳಲ್ಲಿ ಪರದೇವತೆ ಯಾರು ಎಂಬುದಕ್ಕೆ ಪ್ರಮಾಣಗಳಿವೆ. ಇವೆಲ್ಲವೂ ತಿಳಿಸುವುದೇನೆಂದರೆ-ಸಮಸ್ತ ಚಿದಚಿತ್ತುಗಳನ್ನು ಶರೀರವಾಗುಳ್ಳವನಾದ, ಲಕ್ಷ್ಮೀಯುಕ್ತನಾದ, ಶ್ರೀಮನ್ನಾರಾಯಣನೇ ಪರದೇವತೆ. ಇವನೇ ಪ್ರಾಪ್ಯನು. ಉಪಾಯನು, ಮುಕ್ತರುಗಳಿಗೆ ಭೋಗ್ಯಸ್ವರೂಪನು ಎಂದು ಸ್ಪಷ್ಟವಾಗಿ ತಿಳಿಸುತ್ತವೆ.

ಎಲ್ಲ ಶಾಸ್ತ್ರಗಳನ್ನೂ ಅವಲೋಕನಮಾಡಿದಮೇಲೆ, ವ್ಯಾಸರು, ಒಂದು ವಿದ್ವನ್ಮಂಡಲಿಯಲ್ಲಿ ಹೀಗೆ ಕೈ ಎತ್ತಿ ಘೋಷಿಸಿದ್ದಾರೆ.—

ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯ ಚ ಪುನಃ ಪುನಃ ।<br>
ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಸ್ಸದಾ ॥<br>
ಸತ್ಯಂ ಸತ್ಯಂ ಪುನಸ್ಸತ್ಯ ಮುದ್ಧೃತ್ಯ ಭುಜಮುಚ್ಯತೇ ।<br>
ವೇದಶಾಸ್ತ್ರಾತ್ಪರಂ ನಾಸ್ತಿ ನ ದೈವಂ ಕೇಶವಾತ್ಪರಂ ॥

ಶ್ರೀಮನ್ನಾರಾಯಣನೇ ಧ್ಯೇಯ ವಸ್ತು. ಅವನು ಬ್ರಹ್ಮ ರುದ್ರರಿಗೂ ಸ್ವಾಮಿಯಾಗಿರುವುದರಿಂದ, ಕೇಶವನೆಂದು ಹೇಳಿಸಿಕೊಳ್ಳುವ ನಾರಾಯಣನೇ ಪರತತ್ವವು. ವೇದಶಾಸ್ತ್ರವೇ ಸರಿಯಾದ ಶಾಸ್ತ್ರ. ಇದಕ್ಕಿಂತ ಶ್ರೇಷ್ಠವಾದುದು ಮತ್ತೊಂದಿಲ್ಲ. ನಾರಾಯಣನೇ ಪರದೇವತೆ ಎಂದು ತಿಳಿಸುತ್ತವೆ. ಹೀಗೆಂದು ಮಹರ್ಷಿ ವ್ಯಾಸರು ತತ್ವಸ್ಥಾಪನೆ ಮಾಡಿದ್ದಾರೆ. ವಿಷ್ಣುವೇ ಪರತತ್ವ ಎಂಬುದಕ್ಕೆ ಅನೇಕ ಪ್ರಮಾಣಗಳಿವೆ.

ಬಾಣಾಸುರಯುದ್ಧದಲ್ಲಿ ರುದ್ರನು ಶ್ರೀಕೃಷ್ಣನನ್ನು ಕುರಿತು ಹೀಗೆ ಹೇಳುವನು "ಹೇ! ದೇವನೇ! ನೀನು ಜಗತ್ತಿನ ಉತ್ಪತ್ತಿ ಲಯಕ್ಕೆ ಕಾರಣನು. ವೈಷಮ್ಯವಿಲ್ಲದವನು. ಆಶ್ರಯಿಸಲು ನಿನಗೆ ಸಮಾನರು, ಅಧಿಕರು ಯಾರೂ ಇಲ್ಲ. ಜಗತ್ತಿನ ಆತ್ಮರುಗಳಿಗೆಲ್ಲ ನೀನು ಆಶ್ರಯನೂ, ಆಧಾರನೂ, ಆಗಿರುವೆ. ಇಂತಹ ನಿನ್ನನ್ನು ದೇವಾ! ಐಹಿಕಾಮುಷ್ಮಿಕ ಫಲ ಪ್ರಾಪ್ತಿಗೆ ಶರಣು ಹೊಂದುವೆನು."

ತಂತ್ವಾ ಜಗತ್ ಸ್ಥಿತ್ಯುದಯಾಂತಹೇತುಂ
ಸಮಂ ಪ್ರಶಾಂತಂ ಸುಹೃದಾತ್ಮನಾಯಕಂ |
ಅನನ್ಯಮೇಕಂ ಜಗದಾತ್ಮ ಕೇಶಂ
ಭವಾಪವರ್ಗಾಯ ಭಜಾಮ ದೇವ ||

ಬ್ರಹ್ಮರುದ್ರರು ಸರ್ವೇಶ್ವರನಿಗೆ ಶರೀರವು. ಅವರು ನಾರಾಯಣನಿಗೆ ಶೇಷಭೂತರು. ಶ್ರೀಮನ್ನಾರಾಯಣನೇ ನಿಸ್ಸಮಾಭ್ಯಧಿಕನು. ಜನನಕಾಲದಲ್ಲಿ ಭಗವತ್ಕಟಾಕ್ಷವು ಮೋಕ್ಷಕ್ಕೆ ಸಾಧಕವು. ಬ್ರಹ್ಮರುದ್ರರ ಕಟಾಕ್ಷವು ಸಂಸಾರಪ್ರಾಪ್ತಿಗೆ ಕಾರಣವು. ಇದೇ ವಿಷಯವನ್ನು ವೇದಾಂತ ದೇಶಿಕರು ಬಹು ಚೆನ್ನಾಗಿ ಉದಹರಿಸಿದ್ದಾರೆ. ಶರಣಾಗತಿ ದೀಪಿಕೆಯ ಒಂದು ಶ್ಲೋಕ ಹೀಗಿದೆ.

ಜಂತೋರಮುಷ್ಯ ಜನನೇ ವಿಧಿಶಂಭುದೃಷ್ಟ್ವಾ
ರಾಗಾದಿನೇವ ರಜಸಾ ತಮಸಾ ಚ ಯೋಗಃ |
ದ್ವೈಪಾಯನ ಪ್ರಭೃತಯಸ್ತ್ವದವೇಕ್ಷಿತಾನಾಂ
ಸತ್ವಂ ವಿಮುಕ್ತಿ ನಿಯತಂ ಭವತೀತ್ಯುಶಂತಿ ||

ಪ್ರಾಣಿಗಳ ಈ ಜನ್ಮವು ಬ್ರಹ್ಮ ರುದ್ರರಿಂದ ನೋಡಲ್ಪಟ್ಟರೆ ಅವರುಗಳಿಗೆ ವಿಷಯಸಂಗವುಂಟಾಗಿ ರಜೋಗುಣ ತಮೋಗುಣ ಹೆಚ್ಚುವುದು. ಹೇ! ದೀಪಪ್ರಕಾಶನಾದ ನಾರಾಯಣನೇ! ನಿನ್ನ ಕಟಾಕ್ಷ ಉಂಟಾದರೆ ಮೋಕ್ಷಸಾಧಕವಾದ ಸತ್ವಗುಣವುಂಟಾಗುವುದೆಂದು ವ್ಯಾಸಾದಿ ಮಹರ್ಷಿಗಳು ಹೇಳುತ್ತಾರೆ.

ದುಷ್ಟನಿಗ್ರಹ, ಶಿಷ್ಟರಕ್ಷಣ, ಧರ್ಮಸ್ಥಾಪನಾದಿ ಕಾರ್ಯಗಳಲ್ಲಿ ದೃಢ ಸಂಕಲ್ಪನಾದ ಶ್ರೀಮನ್ನಾರಾಯಣನು ಒಬ್ಬನನ್ನು ಅವನ ದುಷ್ಕರ್ಮಗಳಿಗೆ ಶಿಕ್ಷಿಸಬೇಕೆಂದು ಇಷ್ಟಪಟ್ಟರೆ, ಅಂತಹವನನ್ನು ದೇವಶ್ರೇಷ್ಠರಾದ ಬ್ರಹ್ಮ ರುದ್ರ ಇಂದ್ರಾದಿಗಳು ರಕ್ಷಿಸಲು ಸಮರ್ಥರಲ್ಲವೆಂದು ವಾಲ್ಮೀಕಿ ಮಹರ್ಷಿಯು ಶ್ರೀಮದ್ರಾಮಾಯಣದಲ್ಲಿ ಉದಹರಿಸಿದ್ದಾನೆ.

ಬ್ರಹ್ಮಾ ಸ್ವಯಂಭೂಶ್ಚತುರಾನನೋ ವಾ
ರುದ್ರಸ್ತ್ರಿನೇತ್ರಸ್ತ್ರಿಪುರಾಂತಕೋ ವಾ ।
ಇಂದ್ರೋ ಮಹೇಂದ್ರಸ್ಸುರನಾಯಕೋ ವಾ
ತ್ರಾತುಂ ನ ಶಕ್ತಾಃ ಯುಧಿ ರಾಮವಧ್ಯಂ ॥

ಶ್ರೀ ಲಕ್ಷ್ಮೀನಾರಾಯಣನೇ ಪರತತ್ವ ಎಂಬುವನ್ನು ಪರಾಶರರು ತಿಳಿಸಿದ್ದಾರೆ. ಯಾಮುನರು ತೋರಿಸಿಕೊಟ್ಟಿದ್ದಾರೆ. ಪರಬ್ರಹ್ಮ ಸಾಕ್ಷಾತ್ಕಾರ ಪಡೆದ ಪರಾಶರರು, ಪರದೇವತಾ ಪಾರಮಾರ್ಥ್ಯವಾದ ಪರಮ ರಹಸ್ಯವನ್ನು ಮೈತ್ರೇಯರಿಗೆ ಉಪದೇಶಮಾಡಿದರು. ಸರ್ವೇಶ್ವರನ ಕೃಪೆಯಿಂದ ಸರ್ವಜ್ಞತೆ ಪಡೆದ ನಾಥಮುನಿಗಳು ಪ್ರಪನ್ನ ಜನಕೂಟಸ್ಥರೆಂದು ಪ್ರಖ್ಯಾತಿ ಪಡೆದ ನಮ್ಮಾಳ್ವಾರ್‌ರವರು, ಲಕ್ಷ್ಮೀನಾರಾಯಣನೇ ಪರತತ್ವ ಅವನೇ ಉಪಾಯಭೂತನು ಎಂದು ತಿಳಿಸಿದ್ದಾರೆ. ಇದನ್ನೇ ಶ್ರೀ ವೇದಾಂತದೇಶಿಕರು ಬಹು ಚೆನ್ನಾಗಿ ಪ್ರತಿಪಾದಿಸಿದ್ದಾರೆ.

ಜನಪದಭುವನಾದಿಸ್ಥಾನಜೈತ್ರಾಸನಸ್ಥೇ-
ಷ್ವನುಗುತ ನಿಜವಾರ್ತಂ ನಶ್ವರೇಷ್ವೀಶ್ವರೇಷು ।
ಪರಿಚಿತನಿಗಮಾಂತಃ ಪಶ್ಯತಿ ಶ್ರೀಸಹಾಯಂ
ಜಗತಿ ಗತಿಮವಿದ್ಯಾದಂತುರೇ ಜಂತುರೇಕಃ ॥



ಶ್ರೀ ವರದರಾಜಸ್ವಾಮಿ, ಕಾಂಚೀಪುರ

ಸರ್ವೇಶ್ವರನನ್ನು ಚೇತನನು ಆಶ್ರಯಿಸಿದರೆ, ನಿರತಿಶಯವಾದ ಸ್ಥಿರವಾದ ಮೋಕ್ಷ ಕೊಡುವುದರ ಜೊತೆಗೆ ಸಕಲೈಶ್ವರ್ಯವನ್ನು ಕುಚೇಲನಿಗೆ ಅನುಗ್ರಹಿಸಿದಂತೆ ಕೊಡುವನು. ಹೀಗಿದ್ದರೂ, ಕರ್ಮಕೃತ ಅಜ್ಞಾನಾಂಧಕಾರದಿಂದ ಆವೃತರಾದವರು ಐಹಿಕ ಕ್ಷುದ್ರಫಲಗಳಲ್ಲಿ ಆಸಕ್ತರಾಗಿ ಅವರವರ ಯೋಗ್ಯತಾನುಸಾರ ರಾಜನನ್ನೂ ಇಂದ್ರನನ್ನೂ, ರುದ್ರನನ್ನೂ, ಬ್ರಹ್ಮನನ್ನೂ ಆಶ್ರಯಿಸುವರು. ಇವರುಗಳ ಸ್ಥಿತಿಯೇ ನಶ್ವರ. ಆದುದರಿಂದ ಪರದೇವತಾ ರೂಪವಾದ ಪರಮಾತ್ಮನನ್ನೇ ಆಶ್ರಯಿಸಬೇಕು. ಶ್ರಿಯಃಪತಿಯನ್ನು ಆಶ್ರಯಿಸಿ ಫಲವನ್ನು ಹೊಂದಿದ ನಿದರ್ಶನ ಹಿಂದೆಯೂ ಉಂಟು. ಈಗಲೂ ಉಂಟು. ಮುಂದಕ್ಕೂ ಉಂಟು. ಪುರುಷಸೂಕ್ತವು "ತತ್ತ್ವಂ ನಾರಾಯಣಃ ಪರಃ" ಎಂದು ಶ್ರೀಮನ್ನಾರಾಯಣನೇ ಪರದೇವತೆ ಎಂದು ಸ್ಥಾಪಿಸಿದೆ.

## ಮುಮುಕ್ಷುವು ಯಾರು

ಯಾವ ಜೀವನು ಪರಮಾತ್ಮನಲ್ಲಿಯೇ ನೆಟ್ಟ ಮನಸ್ಸುಳ್ಳವನಾಗಿ, ಪರಮಾತ್ಮ ವ್ಯತಿರಿಕ್ತ ವಿಷಯುಗಳಲ್ಲಿ ವೈರಾಗ್ಯ ಹೊಂದಿ, ಭಗವದನುಭವದಲ್ಲಿ ಸದಾ ಮನಸ್ಸುಳ್ಳವನಾಗಿರುವನೋ ಅಂತಹವನು ಮುಮುಕ್ಷುವು. ಅಂದರೆ ಮೋಕ್ಷವನ್ನು ಅಪೇಕ್ಷಿಸತಕ್ಕವನು.

ಕೃತಯುಗದಲ್ಲಿ ಮಾಂಧಾತ ಚಕ್ರವರ್ತಿಯು ರಾಜ್ಯವಾಳಿ ಭೂಮಿಯನ್ನು ಬಿಟ್ಟುಹೋದನು. ತ್ರೇತಾಯುಗದಲ್ಲಿ ಶ್ರೀರಾಮನು ದುಷ್ಟರಾದ ರಾವಣಾದಿ ರಾಕ್ಷಸರನ್ನು ಕೊಂದು ಅತಿಮಾನುಷ ಕಾರ್ಯಮಾಡಿ ಭೂಮಿಯಿಂದ ಮರೆಯಾದನು. ದ್ವಾಪರಯುಗದಲ್ಲಿ ಶ್ರೀ ಕೃಷ್ಣನ ಸಹಾಯದಿಂದ ಮಹಾ ಖ್ಯಾತಿವಂತರಾದ ಪಂಚಪಾಂಡವರು ಭೂಮಿಯನ್ನು ಬಿಟ್ಟುಹೋದರು. ಇವುಗಳಿಂದ ತಿಳಿಯಬೇಕಾದ ಅಂಶವೆಂದರೆ ಗೃಹ, ಪುತ್ರ, ದಾರಾದಿ ವಿಷಯಗಳಲ್ಲಿ ಹೆಚ್ಚು ಮಮತೆ ಇಡಬಾರದು. ಹಾಗೆ ಮಾಡುವುದು ದುಃಖವೆಂಬ ನರಕವನ್ನು ಆಹ್ವಾನಿಸಿದಂತೆ. ಸ್ವರ್ಗಾದಿ ಪ್ರಾಪ್ತಿಯಿಂದ ಕೂಡ ದುಃಖ ತಪ್ಪಿದ್ದಲ್ಲ. ಆದುದರಿಂದ ದುಃಖಮಿಶ್ರವಲ್ಲದ ಪರಿಶುದ್ಧವಾದ ಪರಮಪದವೆಂಬ ಮೋಕ್ಷವನ್ನು ಅಪೇಕ್ಷಿಸಬೇಕು. ಅಂತಹವನೇ ಪ್ರಪನ್ನನು.

ಕ್ಷೇತ್ರಾಣಿ ಮಿತ್ರಾಣಿ ಧನಾನಿ ನಾಥ
ಪುತ್ರಾಶ್ಚ ದಾರಾಃ ಪಶವೋ ಗೃಹಾಶ್ಚ ।
ತ್ವತ್ಪಾದಪದ್ಮಪ್ರಣವಾತ್ಮಬುದ್ಧೇ-
ರ್ಭವಂತಿ ಸರ್ವೇ ಪ್ರತಿಕೂಲರೂಪಾಃ ॥

ಕ್ಷೇತ್ರ, ಮಿತ್ರ, ಧನ, ಪುತ್ರ, ದಾರಾ, ಪಶು, ಗೃಹ,—ಇತ್ಯಾದಿಗಳೆಲ್ಲವೂ ಹೇ! ಸರ್ವೇಶ್ವರನಾದ ಸ್ವಾಮಿಯೇ! ನಿನ್ನ ಪಾದಕಮಲಗಳಲ್ಲಿ ಆಸಕ್ತರಾದ ಮನಸ್ಸುಳ್ಳವರಿಗೆ ಪ್ರತಿಕೂಲವು. ಆದುದರಿಂದ ಇವುಗಳ ವಿಷಯದಲ್ಲಿ ಮುಮುಕ್ಷುವಿಗೆ ವೈರಾಗ್ಯ ಹುಟ್ಟಬೇಕು. ಆದರೆ ಮುಮುಕ್ಷುವು ಕಾಮ್ಯ ಕರ್ಮಗಳನ್ನು ಬಿಟ್ಟು,ಸಂಸಾರದಿಂದ ನಿವೃತ್ತಿ ಹೊಂದುವ ವ್ಯಾಪಾರಗಳಲ್ಲಿ ಪ್ರವರ್ತಿಸಿ ಭಗವಂತನ ಭಜನ ಕೈಂಕರ್ಯಾದಿಗಳಲ್ಲಿ ನಿರತನಾಗಬೇಕು.

ಮುಮುಕ್ಷುವಾಗಿರಲು ಯಾರು ಅಧಿಕಾರಿಗಳು? ಇಂತಹವರು ಆರು ವಿಶೇಷಣಗಳಿಂದ ಕೂಡಿರಬೇಕೆಂದು ಆಚಾರ್ಯರು ತಿಳಿಸಿದ್ದಾರೆ.

1. ಪವಿತ್ರವಾದ ಆತ್ಮಸ್ವರೂಪ ತಿಳಿದು ಪರದೇವತೆ ಯಾರು ಎಂಬುದನ್ನು ನಿಶ್ಚಯಮಾಡಿ ಅಂತಹ ವಿಲಕ್ಷಣವಾದ ವೈಕುಂಠಕ್ಕೆ ಹೋಗಲು ಅರ್ಹನಾದವನು.

2. ಪಾಪಭೀರುಗಳಾಗಿರಬೇಕು.

3. ಪರಮಾತ್ಮನು ತನಗೆ ಆಧಾರನು, ನಿಯಾಮಕನು, ಶೇಷಿಯು ವಿಭುವು, ಸರ್ವಜ್ಞನು ದಿವ್ಯಮಂಗಳ ವಿಗ್ರಹಯುಕ್ತನು, ಚೇತನನಾದ ತಾನು ಆಧೇಯನು, ನಿಯಾಮ್ಯನು ಶೇಷನು-ಎಂದು ತಿಳಿದು (ಕೈಂಕರ್ಯ) ಸೇವೆ ಮಾಡುವುದೇ ತನ್ನ ಸ್ವರೂಪನೆಂದು ತಿಳಿಯುವವನು.

4. ಅಹಂಕಾರ, ಮಮಕಾರವನ್ನು ಬಿಟ್ಟವರು.

5. ಐಹಿಕಾದಿ ಭೋಗಗಳಲ್ಲಿ ದೋಷವಿದೆ ಎಂದು ತಿಳಿದು ಪರಮಾತ್ಮನಲ್ಲಿ ಮನಸ್ಸಿಟ್ಟು ವೈರಾಗ್ಯದಿಂದಿರುವವರು.

6. ಕಾಮ್ಯಕರ್ಮಗಳಲ್ಲಿ ಅಪೇಕ್ಷೆ ಇಡದೆ, ನಿವೃತ್ತಿ ಧರ್ಮದಲ್ಲಿ ಮನಸ್ಸುಳ್ಳವರಾಗಿರುವವರು. ಯಾರು ಮೇಲೆ ಕಂಡ ಆರು ಧರ್ಮಗಳನ್ನು ಆಚರಿಸುವರೋ ಅವರು ಮುಮುಕ್ಷುಗಳು.

ಇಂತಹ ಮುಮುಕ್ಷುವಾಗಬೇಕಾದರೆ ಪರಮಾತ್ಮನ ಕೃಪೆ ಬೇಕು. ಇಂತಹ ವೈವಾನುಗ್ರಹ ಸಂಪಾದಿಸುವವರು ವಿರಳ. ಆದರೆ ಹಾಗೆ ಸಂಪಾದಿಸುವುದಕ್ಕೆ ಸರ್ವರಿಗೂ ಅಧಿಕಾರವಿವೆ ಆದುದರಿಂದಲೇ ಪ್ರಪತ್ತಿಯು ವಿಶ್ವ ಧರ್ಮವೆನ್ನಿಸಿಕೊಳ್ಳುವುದಕ್ಕೆ ಅರ್ಹವಾಗಿದೆ. ಮುಮುಕ್ಷುವಿಗೆ ಐಹಿಕದಲ್ಲಿ ಜಿಹಾಸೆ ಹುಟ್ಟಿ, ವೈರಾಗ್ಯ ಬರಬೇಕಾದರೆ, ಅವನು ಇಂದ್ರಿಯಗಳನ್ನು ಜಯಿಸಬೇಕು. ಅಂತಹವನು ಧೀರನು. ಜಗತ್ತಿನ ಶಬ್ದಾದಿ ವಿಷಯಗಳನ್ನು ವಿಷಮಿಶ್ರವಾದ ಜೇನುತುಪ್ಪದಂತೆ ಭಾವಿಸುವನು. ಅಲ್ಪಾನಂದಕರವಾದ ಕೈವಲ್ಯ ಪ್ರಾಪ್ತಿಯನ್ನು ಕೂಡ ಅಪೇಕ್ಷಿಸುವುದಿಲ್ಲ. ಇದನ್ನು ಪರಮಾತ್ಮಾನುಭವಕ್ಕೆ ಹೋಲಿಸಿದರೆ ಇವುಗಳೆಲ್ಲವೂ ನರಕಕ್ಕೆ ಸಮಾನ ಎಂದು ತಿಳಿಯುವನು. ಪರಬ್ರಹ್ಮಾನುಭವದಲ್ಲಿ ಉತ್ಕಟವಾದ ಇಚ್ಛೆಯುಳ್ಳವನೇ ಮುಮುಕ್ಷುವು.

## ಮೋಕ್ಷೋಪಾಯಗಳು

ಮಧು ವಿದ್ಯೆ, ಪಂಚಾಗ್ನಿ ವಿದ್ಯೆ, ದಹರವಿದ್ಯೆ, ಸದ್ವಿದ್ಯೆ ಇತ್ಯಾದಿ ಮೂವತ್ತೆರಡು ವಿದ್ಯೆಗಳಿವೆ. ಇವುಗಳನ್ನು ಅನುಷ್ಠಾನಮಾಡಿ, ಆ ಮೂಲಕ ಮೋಕ್ಷವನ್ನು ಪಡೆಯಬಹುದೆಂದು ಶಾಸ್ತ್ರಗಳು ತಿಳಿಸುತ್ತವೆ. ಇವೆಲ್ಲವೂ ಬ್ರಹ್ಮ ವಿದ್ಯೆಗಳೇ. ಹಾಗೆಯೇ ಪ್ರಪತ್ತಿ ಎಂಬುದೂ ಬ್ರಹ್ಮವಿದ್ಯೆಯೇ. ಇವೆಲ್ಲವನ್ನೂ ಭಕ್ತಿಮಾರ್ಗ ಎಂದು ಕರೆಯುವುದು ರೂಢಿಯಲ್ಲಿ ಬಂದಿದೆ. ಆದರೆ ಭಕ್ತಿ ಎಂಬ ಉಪಾಯ ಪ್ರತ್ಯೇಕವಾಗಿದೆ. ಒಬ್ಬೊಬ್ಬರಿಗೆ ಒಂದೊಂದು ವಿದ್ಯೆಯಲ್ಲಿ ಅಭಿರುಚಿ ಹುಟ್ಟಬಹುದು. ಇವುಗಳಲ್ಲಿ ಬಹು ಮುಖ್ಯವಾದ ಮೋಕ್ಷೋಪಾಯಗಳು ಎರಡು. ಒಂದು ಭಕ್ತಿ, ಇನ್ನೊಂದು ಪ್ರಪತ್ತಿ. ಇವೆರಡಕ್ಕೂ ಉಳಿದ ಮೂವತ್ತೆರಡು ವಿದ್ಯೆಗಳಿಗೂ ಅನುಷ್ಠಾನವಲ್ಲಿ ವ್ಯತ್ಯಾಸವಿದೆ. ಭಕ್ತಿ ಉಪಾಸನೆಯಲ್ಲಿ ಪ್ರಾರಬ್ಧ ಕರ್ಮಕಳೆದ ನಂತರ ಮೋಕ್ಷ. ಪ್ರಪತ್ತಿಯಲ್ಲಿ ಪ್ರಾರಬ್ಧ ಕಳೆಯಲಿ, ಕಳೆಯದಿರಲಿ ದೇಹಾವಸಾನವಾದೊಡನೆ ಮೋಕ್ಷ ಹೀಗೆ ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ವರ್ತಿಸುವುದಕ್ಕೆ ಕಾರಣವೇನೆಂದರೆ, ಅದು ಅವರವರ ಸುಕೃತ ಪರಿಪಾಕದಿಂದ ಉಂಟಾಗುವ ಸಾಮರ್ಥ್ಯ. ಒಬ್ಬ ಅಧಿಕಾರಿ ಶಕ್ತನಾಗಿದ್ದರೆ, ಯೋಗ, ಅಥವಾ ಭಕ್ತಿಯಲ್ಲಿ ಪ್ರವರ್ತಿಸಬಹುದು.

ಅಶಕ್ತನಾದರೆ ಸುಲಭವಾದ, ನ್ಯಾಸ ಅಥವಾ ಪ್ರಪತ್ತಿ ವಿದ್ಯೆಯನ್ನು ಅವಲಂಬಿಸಬಹುದು. ಹೀಗೆ ಉಪಾಯದಲ್ಲಿ ವ್ಯತ್ಯಾಸವಿದ್ದರೂ ಫಲದಲ್ಲಿ ವ್ಯತ್ಯಾಸವಿಲ್ಲ.

ಈ ಅಧಿಕಾರಿಗಳಲ್ಲಿ ಎರಡು ವಿಧ. ಒಬ್ಬನು ಸದ್ವಾರಕ ಪ್ರಪತ್ತಿ ನಿಷ್ಠ. ಇನ್ನೊಬ್ಬನು ಅದ್ವಾರಕ ಪ್ರಪತ್ತಿನಿಷ್ಠ. ಇವರನ್ನು ಭಕ್ತ, ಪ್ರಪನ್ನ ಎಂದು ಹೇಳಿದೆ. ಸದ್ವಾರಕ, ಅದ್ವಾರಕ ಎಂದು ಏಕೆ ಹೇಳಲಾಗಿದೆ ಎಂದರೆ, ಭಕ್ತಿ ಶಬ್ದಕ್ಕೆ ಪ್ರೀತಿ ಪೂರ್ವಕವಾದ ಧ್ಯಾನ ಎಂದು ಅರ್ಥ. ಇದರಲ್ಲಿ ಪ್ರಪತ್ತಿ ಅನುಷ್ಠಾನ ಇರುವುದರಿಂದ ಸದ್ವಾರಕ ಅದ್ವಾರಕ ಎಂದು ಕರೆಯಲಾಗಿದೆ. ಭಕ್ತಿಯೋಗದಲ್ಲಿ ಭಕ್ತಿಸಾಧನರೂಪ. ಪ್ರಪತ್ತಿಯಲ್ಲಿ ಅದು ಫಲರೂಪ. ಭಕ್ತಿಯೋಗದಲ್ಲಿ ಪ್ರಪತ್ತಿಯು ಅಂಗ, ಪ್ರಪದನದಲ್ಲಿ ಪ್ರಪತ್ತಿಯು ಅಂಗಿ. ಆದುದರಿಂದ ಸದ್ವಾರಕ, ಅದ್ವಾರಕ ಎಂಬ ವಿಭಾಗ ಸರಿಯಾಗಿದೆ. ಅಧಿಕಾರಿಯ ಅರ್ಹತೆಗನುಸಾರ ಸ್ನಾನಕ್ರಮದಲ್ಲಿ ಏಳು ವಿಧ ಎಂದು ಶಾಸ್ತ್ರಗಳು ಹೇಗೆ ತಿಳಿಸುವುವೋ ಹಾಗೆಯೇ ಪ್ರಪತ್ತಿಯ ಅಧಿಕಾರಿ ಶಕ್ತನೋ, ಅಶಕ್ತನೋ ಎಂದು ತಿಳಿಸಿ ಅದಕ್ಕನುಸಾರವಾಗಿ ಪ್ರಪತ್ತಿಯು ಉಕ್ತಿನಿಷ್ಠೆಯೋ ಆಚಾರ್ಯನಿಷ್ಠೆಯೋ ಎಂದು ಹೇಳಿಸಿಕೊಳ್ಳುವುದು.

ಪ್ರಪತ್ತಿಯ ಅಂಗಗಳಲ್ಲಿ ಅಷ್ಟು ತಿಳಿವಳಿಕೆ ಇಲ್ಲದಿದ್ದರೂ; ಸರ್ವೇಶ್ವರನನ್ನು ಬಿಟ್ಟರೆ ಗತಿಯೇ ಇಲ್ಲ ಎಂಬ ಆಕಿಂಚನ್ಯಭಾವ ಇರಬೇಕು. ಇನ್ನೊಂದು ಪರಮಾತ್ಮನನ್ನು ನಂಬಿವರೆ ರಕ್ಷಿಸಿಯೇ ರಕ್ಷಿಸುವನು ಎಂಬ ಮಹಾ ವಿಶ್ವಾಸವಿರಬೇಕು. ಮತ್ತೊಂದು ಆಚಾರ್ಯರನ್ನು (ಗುರುವನ್ನು) ಆಶ್ರಯಿಸಿ ಅವರು ಹೇಳಿಕೊಟ್ಟ ಅರ್ಥಗರ್ಭಿತ ವಾಕ್ಯಗಳನ್ನು ಉಚ್ಚರಿಸಬೇಕು. ಬಾಲಕನೊಬ್ಬನು "ಭವತಿ ಭಿಕ್ಷಾಂದೇಹಿ" ಎಂದು ಹೇಳುವಾಗ ಪದಗಳ ಅರ್ಥಜ್ಞಾನವಿಲ್ಲದಿದ್ದರೂ, ಒಂದೇ ಒಂದು ಸಲ ಹೇಳಿದಾಗ ಅಪೇಕ್ಷಿತ ಮನೋರಥ ಕೈಗೂಡುವಂತೆ, ಪ್ರಪತ್ತಿಯನ್ನು ಮಹಾ ವಿಶ್ವಾಸದಿಂದ ಒಂದೇ ಒಂದು ಸಲ ಅನುಷ್ಠಿಸತಕ್ಕದ್ದು. ಅಂತಹವನ ವಿಷಯದಲ್ಲಿ ಸ್ವಾಮಿಯ ಕೃಪೆ ಇದ್ದೇ ಇರುವುದು. ಫಲಪ್ರಾಪ್ತಿ ಆಗಿಯೇ ಆಗುವುದು. ಈ ವಿಷಯವನ್ನು ಕೂರೇಶರು ಅತಿಮಾನುಷ ಸ್ತವದಲ್ಲಿ ತಿಳಿಸಿದ್ದಾರೆ.

ಪಾಪೀಯಸೋಽಪಿ ಶರಣಾಗತಿಶಬ್ದಭಾಜೋ
ನೋಪೇಕ್ಷಣಂ ಮಮ ತವೋಚಿತಮೀಶ್ವರಸ್ಯ ।
ತ್ವದ್ ಜ್ಞಾನಶಕ್ತಿ ಕರುಣಾಸು ಸತೀಷು ನೇಹ
ಪಾಪಂ ಪರಾಕ್ರಮಿತುಮರ್ಹತಿ ಮಾಮಕೀನಂ ॥

ಹೆಚ್ಚು ಪಾಪ ಮಾಡಿದವರೂ ಸಹ ಶರಣಾಗತಿ ಶಬ್ದ ಉಚ್ಚರಿಸಿದರೆ ಅಂತಹವರ ನಿರಾಕರಣ ಸರ್ವೇಶ್ವರನಿಗೆ ಉಚಿತವಲ್ಲ. ಏಕೆಂದರೆ ಅವನು ಜ್ಞಾನಶಕ್ತಿ ಪರಿಪೂರ್ಣನು. ಹೀಗಿರುವಾಗ ಚೇತನನ ಪಾಪವು ಅವನನ್ನು ಆಕ್ರಮಿಸಲು ಸ್ವಾಮಿಯು ಅವಕಾಶ ಕೊಡುವುದಿಲ್ಲ. "ಶರಣಾಗತಿಶಬ್ದ ಭಾಜಃ" ಎಂಬ ಪ್ರಯೋಗದಿಂದ ಉಕ್ತಿಮಾರ್ಗವು ಸೂಚಿತವಾಯಿತು. ಭಾಷ್ಯಕಾರರ ಪ್ರಿಯ ಶಿಷ್ಯರಾದ ಮತ್ತು ಅವರ ಅಭಿಪ್ರಾಯವನ್ನು ಚೆನ್ನಾಗಿ ತಿಳಿದಿದ್ದ ಕೂರನಾಥರು (ಕೂರತ್ತಾಳ್ವಾರ್) ಉಕ್ತಿನಿಷ್ಠೆಯನ್ನು ಸಮರ್ಥಿಸುತ್ತಾರೆ. ಆದರೆ ಉಕ್ತಿನಿಷ್ಠೆಯು ಆಚಾರ್ಯನಿಷ್ಠೆಯೊಡನೆ ಸೇರಿದರೇನೇ ಪ್ರಪತ್ತಿಯು ಕಾರ್ಯಕಾರಿಯಾಗುವುದು ಎಂದು ಕೆಲವರು ಹೇಳುವರು.

ಶ್ರೀ ಪರಾಶರಭಟ್ಟರು, ಈ ಎರಡು ನಿಷ್ಠೆಯನ್ನು ಆಶ್ರಯಿಸಿದರೆ, ಸ್ವಾಮಿಯು ರಕ್ಷಿಸಿಯೇ ರಕ್ಷಿಸುವನು ಎಂದು ತಿಳಿಸಿದ್ದಾರೆ.

ತವ ಭರೋಽಹ ಮಕಾರಿಷಿ ಧಾರ್ಮಿಕೈ-
ಶ್ಶರಣಮಿತ್ಯಪಿ ವಾಚಮುದೈರಿತಂ ।
ಇತಿ ಸ ಸಾಕ್ಷಿಕ ಯನ್ನಿದಮದ್ಯಮಾಂ
ಕುರು ಭರಂ ತವ ರಂಗಧುರಂಧರ ॥

ಹೇ ! ರಂಗಭೂಪತಿಯೇ ! ಅನನ್ಯಗತಿಕನಾದ ನಾನು ಧರ್ಮಿಷ್ಠರಾದ ಪೂರ್ವಾಚಾರ್ಯರ ಮೂಲಕ, ಪರಿಪೂರ್ಣನೂ, ಮಹೋದಾರನೂ, ಆಗಿರುವ ಪರಮಾತ್ಮನಿಂದ ರಕ್ಷಿಸಲ್ಪಡುವಂತೆ ಆದೆನು. ಶರಣು ಎಂಬ ಮಾತನ್ನೂ ಕೂಡ ಹೇಳಿದೆನು. ಆಚಾರ್ಯರು ಸಾಕ್ಷಿ ಎಂದು ತೋರಿಸಿ, ಚೇತನನಾದ ನನ್ನನ್ನು ರಕ್ಷಿಸುವಭಾರ ನಿನಗೆ ಸೇರಿದ್ದು. ಒಂದೇಸಲ ಮಾಡಿದ ಪ್ರಪತ್ತಿ ಒಂದೇಸಲ ಹೇಳಿದ ದ್ವಯಮಂತ್ರ ಇವೆರಡರಿಂದ ಚೇತನನು ಕೃತಕೃತ್ಯನಾಗುವನು. ಈ ಅಭಿಪ್ರಾಯವನ್ನೇ ಶ್ರೀ ನಿಗಮಾಂತ ಮಹಾದೇಶಿಕರು ಶರಣಾಗತಿ ದೀಪಿಕೆಯಲ್ಲಿ ಉಪಪಾದಿಸಿದ್ದಾರೆ.

ಭಕ್ತಿಃ ಪ್ರಪತ್ತಿರಥವಾ ಭಗವಂಸ್ತದುಕ್ತಿಃ
ತನ್ನಿಷ್ಠ ಸಂಶ್ರಯ ಇತೀವ ವಿಕಲ್ಪ್ಯಮಾನಂ ।
ಯತ್ಕಿಂಚಿದೇಕ ಮುಪಪಾದಯತಾ ತ್ವಯೈವ
ತ್ರಾತಾಸ್ತರಂತ್ಯವಸರೇ ಭವಿನೋ ಭವಾಬ್ಧಿಂ ॥

ಭಕ್ತಿ, ಪ್ರಪದನ, ಉಕ್ತಿನಿಷ್ಠೆ, ಆಚಾರ್ಯನಿಷ್ಠೆ-ಇವು ನಾಲ್ಕೂ ಮೋಕ್ಷೋಪಾಯಗಳು. ವುಗಳಲ್ಲಿ ಯಾವುದಾದರೊಂದನ್ನು ಅನುಷ್ಠಿಸಿದರೆ ಸಾಕು. ಅದು ಮೋಕ್ಷಪ್ರಾಪ್ತಿಯನ್ನುಂಟುಮಾಡುವುದರಲ್ಲಿ ಸಂದೇಹವಿಲ್ಲ.

ಸಮರ್ಥನಾದವನು, ಅಸಮರ್ಥನಿಗಾಗಿ ರಾಜನಲ್ಲಿ ಪ್ರಾರ್ಥಿಸಿ, ಫಲ ಪ್ರಾಪ್ತಿ ಉಂಟಾಗುವ ಹಾಗೆ ಮಾಡುವಂತೆ, ಆಚಾರ್ಯರು ಶಿಷ್ಯನ ಮೋಕ್ಷ ಕ್ಕಾಗಿ ಪ್ರಪತ್ತಿ ಮಾಡುವರು. ಪರಮಾತ್ಮನನ್ನು ನೇರವಾಗಿ ಪ್ರಾರ್ಥಿಸಿ ದವರಿಗೆ ಒಂದುವೇಳೆ ಸಿದ್ಧಿ ಉಂಟಾಗುವುದೋ ಇಲ್ಲವೋ ಎಂಬ ಸಂದೇಹ ಬಂದರೂ ಬರಬಹುದು. ಆದರೆ ಅವನ ಭಕ್ತರಾದ (ಗುರುಗಳು) ಆಚಾರ್ಯ ರನ್ನು ನಂಬಿದವರಿಗೆ ಎಂದಿಗೂ ಚ್ಯುತಿ ಉಂಟಾಗುವುದಿಲ್ಲ. ನ್ಯಾಸ ತಿಲಕ ದಲ್ಲಿ ಸ್ವಾಮಿ ವೇದಾಂತದೇಶಿಕರು ಹೀಗೆ ತಿಳಿಸಿದ್ದಾರೆ.

ಅಂಧೋನಂದಗ್ರಹಣ ವಶಗೋ ಯಾತಿ ರಂಗೇಶ ಯದ್ವತ್
ಪಂಗುರ್ನೌಕಾಕುಹರನಿಹತೋ ನೀಯತೇ ನಾವಿಕೇನ ।
ಭುಂಕ್ತೇ ಭೋಗಾನವಿದಿತ ನೃಪಸ್ಸೇವಕಸ್ಯಾರ್ಭಕಾದಿಃ
ತ್ವತ್ಸಂಪ್ರಾಪ್ತೌ ಪ್ರಭವತಿ ತಥಾ ದೇಶಿಕೋ ಮೇ ದಯಾಳುಃ ॥

ಹೆ! ರಂಗನಾಥನೇ! ಕುರುಡನು, ಕುರುಡನಲ್ಲದವನನ್ನು ಹಿಡಿದು ಕೊಂಡು ಹೇಗೆ ಹೋಗುತ್ತಾನೋ, ಕುಂಟನು ದೋಣಿಯಮೂಲಕ ನಾವಿಕನ ಸಹಾಯದಿಂದ ಆಚೆ ದಡವನ್ನು ಹೇಗೆ ಸೇರುವನೋ, ರಾಜ ಸೇವಕರು ರಾಜನಿಗೆ ತಿಳಿಯದಂತೆ ರಾಜಭೋಗಗಳನ್ನು ಹೇಗೆ ಅನುಭವಿಸು ವರೋ, ಹಾಗೆ ಜ್ಞಾನ, ಶಕ್ತಿ ಎರಡೂ ಇಲ್ಲದ ಚೇತನರ ವಿಷಯದಲ್ಲಿ, ಆಚಾರ್ಯರು (ಗುರುಗಳು) ಅನುಗ್ರಹಿಸುವ ಭರಸಮರ್ಪಣೆಯಿಂದ ಮೋಕ್ಷ ಪ್ರಾಪ್ತಿಯುಂಟಾಗುವುದು. ಮೇಲಿನ ಮೂರು ದೃಷ್ಟಾಂತಗಳಿಂದ ಫಲವು

ಹೇಗೆ ಸಿದ್ಧಿಸುವುದೋ, ಹಾಗೆ ಪರಮಾತ್ಮನ ಪ್ರಾಪ್ತಿಯಲ್ಲಿ ಕೃಪಾಶಾಲಿಗಳಾದ ಆಚಾರ್ಯರು ಚೇತನರಿಗೆ ಸಹಾಯಮಾಡಲು ಸಮರ್ಥರಾಗಿರುತ್ತಾರೆ.

ಭಕ್ತಿಗೂ, ಪ್ರಪತ್ತಿಗೂ ಇರುವ ವ್ಯತ್ಯಾಸವನ್ನು ಹೀಗೆ ಸಂಗ್ರಹಿಸಬಹುದು. ಭಕ್ತಿಮಾರ್ಗವು ವೇದಾಧಿಕಾರಿಗಳಾದ ತ್ರೈವರ್ಣಿಕರಿಗೆ ಮಾತ್ರ ಅನ್ವಯ. ಸಂಚಿತ, ಆಗಾಮಿ ಪಾಪ ತೊಲಗಿದರೂ, ಪ್ರಾರಬ್ಧ ಕರ್ಮವನ್ನು ಅನುಭವಿಸಿಯೇ ತೀರಬೇಕು. ಉಪಾಸನವಾದ ಭಕ್ತಿಯು ಪೂರ್ತಿಯಾದ ಬಹುಕಾಲದ ಮೇಲೆ ಫಲಪ್ರಾಪ್ತಿಯಾಗುವುದು. ಶಕ್ತರಾದವರಿಂದ ಮಾತ್ರ ಇದನ್ನು ಅನುಷ್ಠಿಸಲು ಸಾಧ್ಯ. ಅಸಕೃತ್ಕರ್ತವ್ಯವಾದುದು. ವಿಳಂಬದಿಂದ ಫಲಪ್ರಾಪ್ತಿಯಾಗುವುದು. ಜನ್ಮಾಂತರ ಉಂಟಾದರೂ ಆಗಬಹುದು. ಇದು ಯಶಸ್ವಿಯಾಗುವುದಕ್ಕೆ ಅನೇಕ ಪ್ರತಿಬಂಧಕಗಳಿರುವುವು. ಇಷ್ಟಾದರೂ ಇದಕ್ಕೆ ಅಂಗ ಪ್ರಪತ್ತಿಯ ಸಹಾಯ ಬೇಕೇ ಬೇಕು.

ಪ್ರಪತ್ತಿಯನ್ನು ಸಮಸ್ತರೂ, ಅನುಷ್ಠಿಸಬಹುದು. ಜಾತಿ, ಲಿಂಗ, ವರ್ಣಬೇಧವಿಲ್ಲದೆ ಎಲ್ಲರೂ ಇದನ್ನು ಆಚರಿಸಬಹುದು. ಇದು ಸಮಸ್ತ ಪಾಪ, ಪುಣ್ಯಗಳನ್ನು ಹೋಗಲಾಡಿಸುವುದು. ಆಚರಿಸಿದ ಕೂಡಲೇ ಇದು ಕೃತಕೃತ್ಯತೆಯನ್ನುಂಟುಮಾಡುವುದು. ಅಶಕ್ತರೂ ಕೂಡ ಇದನ್ನು ಮಾಡಬಹುದು. ಸಕೃತ್ಕರ್ತವ್ಯವಾದುದು ಶೀಘ್ರದಲ್ಲಿ ಫಲವನ್ನು ಕೊಡುವುದು. ಆಚರಿಸಿದನಂತರ ಇದಕ್ಕೆ ಯಾವ ಪ್ರತಿಬಂಧಕವೂ ಇರುವುದಿಲ್ಲ. ಇನ್ನಾವುದರ ಸಹಾಯವೂ ಇದಕ್ಕೆ ಬೇಕಿಲ್ಲ. ಅಚೇತನವಾದ ಅಗಸೆ ಮರಕ್ಕೂ ಮೋಕ್ಷ ದೊರೆಯುವಂತೆ ಆಚಾರ್ಯರು ಮಾಡಿದರೆಂದಮೇಲೆ ಇದು ಎಷ್ಟು ವಿಸ್ತಾರವಾದ ಸಾರ್ವಜನಿಕ ರೂಪವಾದ ವಿದ್ಯೆ ಎಂಬುದನ್ನು ಊಹಿಸಬಹುದು. ಆದುದರಿಂದ ಇದನ್ನು ವಿಶ್ವಧರ್ಮ ಎಂದು ಕರೆಯುವುದರಲ್ಲಿ ಆಕ್ಷೇಪಣೆಯಿಲ್ಲ.

ಸಮಸ್ತ ಜಗತ್ತನ್ನು ಸೃಷ್ಟಿಸಿದ ದಯಾಶಾಲಿಯಾದ ಪರಮಾತ್ಮನೇ ಪ್ರಸನ್ನನಾದರೆ, ಯಾವುದು ತಾನೆ ದುರ್ಲಭವು ಎಂದು ಧ್ರುವನು ಹೇಳುತ್ತಾನೆ. ಪ್ರಹ್ಲಾದನೂ ಕೂಡ ಹಾಗೆಯೇ ತಿಳಿಸುತ್ತಾನೆ.

ತಸ್ಮಿನ್ ಪ್ರಸನ್ನೇ ಕಿಮಿಹಾಸ್ತ್ಯಲಭ್ಯಂ ಧರ್ಮಾರ್ಥಕಾಮೈರಲಮಲ್ಪಕಾಸ್ತೇ।
ಸಮಾಶ್ರಿತಾದ್ಬ್ರಹ್ಮತರೋರನಂತಾ ನ್ನಿಸ್ಸಂಶಯೋ ಮುಕ್ತಿಫಲಪ್ರಪಾತಃ॥

ಪರಮಾತ್ಮನ ಅನುಗ್ರಹ ಒಂದು ಇದ್ದರೆ, ಯಾವುದು ತಾನೆ ದುರ್ಲಭ. ಚತುರ್ವಿಧ ಪುರುಷಾರ್ಥಗಳೂ ದೊರೆಯುವುವು. ಆದರೆ ಧರ್ಮ ಅರ್ಥ, ಕಾಮಗಳು ಅಲ್ಪಫಲಗಳು, ಸರ್ವೋತ್ಕೃಷ್ಟವಾದ ಪರಬ್ರಹ್ಮವೆಂಬ ಕಲ್ಪವೃಕ್ಷವನ್ನು ಸಾಧ್ಯೋಪಾಯದ ಮೂಲಕ ಆಶ್ರಯಿಸುವುದಾದರೆ, ಮೋಕ್ಷವು ಕರಗತವಾಗುವುದು. ಭಕ್ತಿಗಿಂತ ಪ್ರಪತ್ತಿಗೆ ಹೆಚ್ಚು ಮಹಿಮೆ. ಪ್ರಪತ್ತಿಯು ಕೋರಿದ ಕಾಲದಲ್ಲಿ ಮೋಕ್ಷಪ್ರಾಪ್ತಿಯನ್ನುಂಟುಮಾಡುವುದು. ಪಾಪನಾಶನದಿಂದ ಶರಣಾಗತನು ಆರ್ತನಾಗಿ ಒಡನೆ ಮೋಕ್ಷವನ್ನು ಅಪೇಕ್ಷಿಸಿದರೆ ತಕ್ಷಣವೂ ದೃಪ್ತನಾಗಿ ದೇಹಾವಸಾನಾನಂತರ ಅಪೇಕ್ಷಿಸಿದರೆ, ಆಗ ಮೋಕ್ಷವು ದೊರೆಯುವುದು. ಮೋಕ್ಷದಂತೆ ಇತರ ಫಲಗಳೂ ಉಂಟಾಗುವುವು. ಭಕ್ತಿಗೆ ಈ ಶಕ್ತಿ ಇಲ್ಲ. ಕರ್ಮಯೋಗನಿಷ್ಠರಾಗಿ ಪರಿಶುದ್ಧರಾದವರೂ, ಜ್ಞಾನಯೋಗ ಭಕ್ತಿನಿಷ್ಠರೂ ಸಹ, ಪ್ರಪತ್ತಿಯನ್ನು ಆಚರಿಸಿದವರ ಕೋಟಿ ಭಾಗದಲ್ಲಿ ಒಂದು ಭಾಗವನ್ನು ಕೂಡ ಹೋಲುವುದಿಲ್ಲ. ಇದರಿಂದ ಪ್ರಪತ್ತಿಗೆ ಒಂದು ಅತಿಶಯ ಮಹಿಮೆ ಹೇಳುವುದಕ್ಕೇ ವಿನಹ, ಭಕ್ತಿಮಾರ್ಗವನ್ನು ನಿಂದಿಸುವುದಕ್ಕಲ್ಲ ಎಂದುತಿಳಿಯಬೇಕು.

ಪ್ರಪನ್ನಾದನ್ಯೇಷಾಂ ನ ದಿಶತಿ ಮುಕುಂದೋ ನಿಜಪದಂ
ಪ್ರಪನ್ನಶ್ಚ ದ್ವೇಧಾ ಸುಚರಿತ ಪರೀಪಾಕಭಿದಯಾ ।
ವಿಳಂಬೇನ ಪ್ರಾಪ್ತಿರ್ಭಜನ ಸುಖಮೇಕಸ್ಯ ವಿಪುಲಂ
ಪರಸ್ಯಾಶು ಪ್ರಾಪ್ತಿಃ ಪರಿಮಿತರಸಾ ಜೀವಿತದಶಾ ॥

ಸಿದ್ಧೋಪಾಯನಾದ ಶ್ರಿಯಃಪತಿಯ ಅನುಗ್ರಹ ಪಡೆದು ಸಾಧ್ಯೋಪಾಯಗಳಲ್ಲಿ ಯಾವುದಾದರೊಂದನ್ನು ಆಶ್ರಯಿಸದೆ ಮುಕ್ತಿ ದೊರೆಯುವುದಿಲ್ಲ. ಹೀಗೆ ಸಾಧ್ಯೋಪಾಯವನ್ನು ಆಶ್ರಯಿಸಿದವನೇ—ಪ್ರಪನ್ನನು. ಪ್ರಪನ್ನನಿಗಲ್ಲದೆ ಇತರರಿಗೆ ಮೋಕ್ಷವಿಲ್ಲ. ಭಕ್ತಿ ಪ್ರಪತ್ತಿಗಳೆರಡರಲ್ಲಿಯೂ ಪ್ರಪತ್ತಿಯ ಅನುಷ್ಠಾನವಿದೆ. ಭಕ್ತನು ಸದ್ವಾರಕನಿಷ್ಠನಾದರೆ, ಸ್ವತಂತ್ರ ಪ್ರಪತ್ತಿ ಆಚರಿಸುವವನು ಅದ್ವಾರಕ ಪ್ರಪತ್ತಿನಿಷ್ಠನು. ಇಬ್ಬರಿಗೂ

ಸಮಾನ ಫಲವೇ ಆದರೂ ಅವನ್ನು ಆಚರಿಸುವುದಕ್ಕೆ ಆಯಾ ಚೇತನರ ಸುಕೃತ ವಿಶೇಷವು ಕಾರಣವಾಗುತ್ತದೆ.

## ಪ್ರಪತ್ತಿಯ ಅಧಿಕಾರಿ

ಪ್ರಪತ್ತಿಗೆ ಯಾರು ಅಧಿಕಾರಿ? ಇದರ ಸ್ವರೂಪವೇನು? ಅಧಿಕಾರಿಯ ಸಾಮಾನ್ಯ ಧರ್ಮವೇನು? ಇವೇ ಮುಂತಾದ ವಿಷಯಗಳನ್ನು ವಿಚಾರ ಮಾಡಬಹುದು. ಭಕ್ತಿಮಾರ್ಗ ಅಥವ ಇತರ ಉಪಾಯಗಳಲ್ಲಿ ಆಸೆ ಇಲ್ಲದೆ ಮತ್ತು ಇದನ್ನು ಆಚರಿಸಲು ಶಕ್ತಿಯಿಲ್ಲದವರು ಪ್ರಪತ್ತಿಗೆ ಅಧಿಕಾರಿಗಳು. ಚೇತನನು ತನ್ನ ಆತ್ಮವನ್ನು ಶ್ರಿಯಃಪತಿಯ ಚರಣಾರವಿಂದಗಳಲ್ಲಿ ಅರ್ಪಿಸುವುದರಿಂದ ಇದಕ್ಕೆ ನ್ಯಾಸವಿದ್ಯೆ ಎಂಬ ಹೆಸರು ಬಂದಿದೆ. ಇತರ ಉಪಾಸನ ವಿದ್ಯೆಗಳಂತೆ ಪ್ರಪತ್ತಿಯು ಜ್ಞಾನರೂಪವಾದ ವಿದ್ಯೆ. ಪ್ರಪತ್ತಿಗೆ ಅರ್ಹನಾಗಬೇಕಾದರೆ, ಅವನಿಗೆ ಕೆಲವು ವಿಶೇಷ ಧರ್ಮಗಳಿರಬೇಕು. ಪ್ರಪತ್ತಿಯಲ್ಲಿ ಪ್ರವರ್ತಿಸುವವನಿಗೆ ಫಲದಲ್ಲಿ ಅಪೇಕ್ಷೆಯೂ ಉಪಾಯಾನುಷ್ಠಾನದಲ್ಲಿ ಶಕ್ತಿಯೂ ಇರಬೇಕು. ಇದೇ ಅಧಿಕಾರ. ಮನೆ ಕಟ್ಟಬೇಕೆಂದು ಇಷ್ಟಪಡುವ ಅಧಿಕಾರಿಗೆ, ಅದನ್ನು ತಾನು ಕಟ್ಟಿ ವಾಸ ಮಾಡಬೇಕೆಂಬ ಅಪೇಕ್ಷೆಯೂ ದ್ರವ್ಯಾದಿ ಸಾಮರ್ಥ್ಯವೂ ಇರಬೇಕಲ್ಲವೇ? ಅದರಂತೆ ಪ್ರಪತ್ತಿ ಅಧಿಕಾರಿಗೆ ಅಪೇಕ್ಷೆ, ಸಾಮರ್ಥ್ಯ ಎರಡೂ ಬೇಕು. ಸಾಮರ್ಥ್ಯ ಎಂದರೆ ಶಾಸ್ತ್ರಾರ್ಥ ತಿಳಿಯುವುದು. ಪ್ರಪತ್ತಿಗಿರುವ ವಿಶೇಷಾಧಿಕಾರ ಎಂದರೆ ಆಕಿಂಚನ್ಯ, ಅನನ್ಯಗತಿತ್ವ, ಪ್ರಪತ್ತಿ ವಿನಹ ಇನ್ಯಾವ ಉಪಾಯಾನುಷ್ಠಾನದಲ್ಲಿ ಶಕ್ತಿಯಿಲ್ಲವೆಂಬ ನಿಶ್ಚಯ ಜ್ಞಾನ, ಮೋಕ್ಷವಲ್ಲದೆ ಇನ್ಯಾವ ಪ್ರಯೋಜನವೂ ಬೇಡವೆಂಬ ನಿರ್ಧಾರ, ಹೀಗೆ ಶೇಷತ್ವ ಪರತಂತ್ರಗಳು ವಿಶೇಷ ಅಧಿಕಾರವನ್ನು ಸೂಚಿಸುತ್ತವೆ.

ಇದನ್ನು ಒಂದೆರಡು ಉದಾಹರಣೆಗಳಿಂದ ಸ್ಪಷ್ಟಪಡಿಸಬಹುದು. ಕಾಕಾಸುರನು, ಶ್ರೀರಾಮನ ಬ್ರಹ್ಮಾಸ್ತ್ರಕ್ಕೆ ತುತ್ತಾಗಿ ಮೂರು ಲೋಕಗಳಲ್ಲಿ ತನಗೆ ಯಾರೂ ರಕ್ಷಕರು ದೊರೆಯದೆ, ಕೊನೆಗೆ ಅನನ್ಯಗತಿಯಿಂದ ಶ್ರೀರಾಮನಲ್ಲಿ ಶರಣಾಗತನಾದನು. ಅಹಿರ್ಬುಧ್ನ್ಯ ಸಂಹಿತೆಯಲ್ಲಿ ಚೇತನನು ಅಪರಾಧಗಳಿಗೆ ತೌರುಮನೆ ಎಂದೂ, ಆಕಿಂಚನ್ಯ, ಅನನ್ಯಗತಿತ್ವ ಬಿಟ್ಟರೆ ಬೇರೆ ಇನ್ಯಾವುದೂ ಇಲ್ಲವೆಂದೂ ತಿಳಿಸಲಾಗಿದೆ. “ ಅಕಿಂಚನೋನನ್ಯಗತಿ

ಶರಣ್ಯ ತ್ವತ್ಪಾದ ಮೂಲಂ ಶರಣಂ ಪ್ರಪದ್ಯೇ" ಎಂದು ಯಾಮುನ ಮುನಿಗಳು ತಿಳಿಸಿದ್ದಾರೆ. ಶ್ರೀ ಭಾಷ್ಯಕಾರರು ಗದ್ಯತ್ರಯದಲ್ಲಿ ಇದನ್ನು ಬಹು ಚೆನ್ನಾಗಿ ಉದಹರಿಸಿದ್ದಾರೆ. ತಿರುವಾಯ್‌ಮೊಳಿಯಲ್ಲಿ ಇದರ ಸ್ವರೂಪವು ಉತ್ತಮ ರೀತಿಯಲ್ಲಿ ವಿವರಿಸಲ್ಪಟ್ಟಿದೆ.

ಭಕ್ತಿಯೋಗಕ್ಕೆ ಅರ್ಹನಾಗಬೇಕಾದರೆ ನಾಲ್ಕು ಧರ್ಮಗಳಿರಬೇಕು. ಈ ಯೋಗಾನುಷ್ಠಾನದಲ್ಲಿ ಶಕ್ತಿ, ಉಪಾಸನೆಯ ಸಂಪೂರ್ಣ ಜ್ಞಾನ, ತ್ರೈವರ್ಣಿಕತ್ವ ಮತ್ತು ವಿಳಂಬ ಪ್ರಾಪ್ತಿಗೆ ಸಿದ್ಧನಾಗಿರುವಿಕೆ ಇವುಗಳಲ್ಲಿ ಒಂದೊಂದೇ ಇದ್ದರೆ ಸಾಲದು. ನಾಲ್ಕೂ ಒಟ್ಟಿಗೇ ಅಗತ್ಯವಾಗಿರಬೇಕು. ಹಾಗಿಲ್ಲದಿದ್ದರೆ ಅದು ಸಿದ್ಧಿಸುವುದಿಲ್ಲ. ಪ್ರಪತ್ತಿಯ ವಿಷಯ ಹಾಗಲ್ಲ, ಯಾರಲ್ಲಿ ಪ್ರಪತ್ತಿ ಮಾಡಬೇಕು ಎಂಬುದಕ್ಕೆ "ಶ್ರೀಶಂ" ಎಂಬ ಉತ್ತರ ತಕ್ಷಣ ದೊರೆಯುತ್ತದೆ. ಪರತತ್ವವೇ ಲಕ್ಷ್ಮೀನಾರಾಯಣರಾಗಿರುವುದರಿಂದ, ಅವರಿಬ್ಬರಲ್ಲಿ ಪ್ರಪತ್ತಿ ಮಾಡಬೇಕು. ಇಂತಹ ಸುಲಭವಾದ ಎಲ್ಲರೂ ಆಚರಿಸಬಹುದಾದ ವಿಶ್ವಧರ್ಮವನ್ನು ಆಚರಿಸುವವರೆಲ್ಲರೂ ಮಹಾ ಭಾಗ್ಯಶಾಲಿಗಳು.

## ಪ್ರಪತ್ತಿ ಪರಿಕರ

ಶರಣಾಗತಿಯು ಜ್ಞಾನರೂಪವಾದ ವಿದ್ಯೆ. ಇದಕ್ಕೆ ಕೆಲವು ಪರಿಕರ ಅಥವ ಅಂಗಗಳುಂಟೆಂದು ಶಾಸ್ತ್ರಗಳು ತಿಳಿಸುತ್ತವೆ. "ನ್ಯಾಸಃ ಪಂಚಾಂಗ ಸಂಯುತಃ" ಎಂದೂ, "ಷಡ್ವಿಧಾ ಶರಣಾಗತಿಃ" ಎಂದೂ ತಿಳಿಸಲಾಗಿದೆ. ಪ್ರಪತ್ತಿಯ ಅನುಷ್ಠಾನ ಕಾಲದಲ್ಲಿ ಈ ಅಂಗಗಳು ಅಗತ್ಯ.

ಜೀವಾತ್ಮನು ಪರಮಾತ್ಮನ ಸ್ವತ್ತು. ಅದು ತನ್ನದು ಎಂದು ಹೇಳಿಕೊಂಡು ಆತ್ಮಾಪಹಾರಿ ಚೋರನಾಗಿರುವ ಇವನು ಶರಣಾಗತಿಮಾಡಿ ಒಂದು ಸಲ ಬೇಡಿದ ಮಾತ್ರದಿಂದ ಸಂಸಾರ ಬಂಧದಿಂದ ಬಿಡುಗಡೆ ಹೊಂದುವನೇ? ಒಬ್ಬ ಕಳ್ಳನು ಅರಮನೆಗೆ ಪ್ರವೇಶಮಾಡಿ ರಾಜನ ಮುಖ್ಯ ಸ್ವತ್ತನ್ನು ಕದ್ದು, ದಂಡನೆಗೆ ಗುರಿಯಾದಾಗ, ತಾನು ರಾಜನಿಗೆ ದಾಸ್ಯಮಾಡುವುದಾಗಿಯೂ, ಕ್ಷಮಿಸುವಂತೆಯೂ ಬೇಡಿದರೆ ಅವನು ಬಿಟ್ಟು ಬಿಡುವನೇ? ಅದರಂತೆ ಅಲ್ಲವೇ ಇದು? ಇದು ಹಾಸ್ಯಾಸ್ಪದವಲ್ಲವೇ? ಎಂದರೆ ಪರಮಾತ್ಮನು ಐಹಿಕ ರಾಜನಂತೆ ಅಲ್ಲ. ಅವನು ದಯಾದಿವ್ಯಾಂ

ಬೋಧಿಯು. ಜಗತ್ತಿಗೆಲ್ಲಕ್ಕೂ ಅಂತರ್ಯಾಮಿ. ಪಾಪಪರಿಹಾರದಲ್ಲಿ ನಿರತನು. ಈ ಕಾರಣಗಳಿಂದ ತನ್ನನ್ನು ಆಶ್ರಯಿಸಿರುವ ಚೇತನನು ಎಷ್ಟೇ ಪಾಪಿಯಾದರೂ, ಒಂದೇ ಒಂದು ಸಲ ಪ್ರಾರ್ಥಿಸಿದರೂ, ಪರಮಾತ್ಮನು ಅವನನ್ನು ರಕ್ಷಿಸಿಯೇ ರಕ್ಷಿಸುವನು.

ಪ್ರಪತ್ತಿಯಲ್ಲಿ ಐದು ಅಂಗಗಳಿವೆ ಪರಮಾತ್ಮನಿಗೆ ತಾನು ದಾಸನಾಗಿ ಅವನ ಆಜ್ಞಾರೂಪ ಪ್ರವರ್ತನಗಳಲ್ಲಿ ಅನುಕೂಲನಾಗಿ ವರ್ತಿಸುವೆನೆಂಬ ನಿರ್ಧಾರ. ಆಜ್ಞಾರೂಪವಾಗಿ ನಿಷೇಧಿಸಿರುವುದನ್ನು ಬಿಟ್ಟುಬಿಡುವೆನೆಂಬ ನಿಶ್ಚಯ. ತನಗೆ ಪರಮಾತ್ಮನೇ ಗತಿ, ಇನ್ಯಾವ ಉಪಾಯವೂ ಇಲ್ಲ ಎಂಬ ದೈನ್ಯ, ಶರಣಾಗತಿ ಮಾಡಿದರೆ ಸ್ವಾಮಿಯು ರಕ್ಷಿಸಿಯೇ ರಕ್ಷಿಸುವನೆಂಬ ಮಹಾ ವಿಶ್ವಾಸ. ತನ್ನ ಇಷ್ಟವೇನೆಂಬುದನ್ನು ಪ್ರಾರ್ಥನಾಮೂಲಕ ಸ್ವಾಮಿಯಲ್ಲಿ ನಿವೇದಿಸುವ ಗೋಪ್ತೃತ್ವವರಣ. ಈ ಐದು ಅಂಗಗಳ ಮೂಲಕ ಆತ್ಮನನ್ನು ಸ್ವಾಮಿಯ ಅಡಿದಾವರೆಗಳಲ್ಲಿ ಅರ್ಪಿಸುವುದೇ ಆತ್ಮನಿಕ್ಷೇಪ.

ಒಬ್ಬನು ಬೆಲೆಯುಳ್ಳ ವಸ್ತುವೊಂದನ್ನು ರಕ್ಷಿಸಲು ಶಕ್ತಿಯಿಲ್ಲದೆ ಯಾರಾದರೂ ಅಪಹರಿಸಿ ಬಿಡುವರೆಂಬ ಭಯದಿಂದ, ರಕ್ಷಿಸಲು ಶಕ್ತಿಯುಳ್ಳ ಇನ್ನೊಬ್ಬನಲ್ಲಿ ಅದನ್ನು ಇಟ್ಟಿರಬೇಕೆಂದು ಪ್ರಾರ್ಥಿಸುವಾಗ, ತಾನು ಅವನ ವಿಷಯದಲ್ಲಿ ಅನುಕೂಲನಾಗಿರುವೆನು ಎಂಬ ಸಂಕಲ್ಪವನ್ನು ತಿಳಿಸುವನು. ಪ್ರತಿಕೂಲಾಚರಣೆ ಮಾಡುವುದಿಲ್ಲವೆಂದು ತಿಳಿಸಿ ರಕ್ಷಣೆಮಾಡುವನು. ಅವನಲ್ಲಿ ಸಂಪೂರ್ಣ ವಿಶ್ವಾಸ ಹೊಂದಿರುವನು. ತಾನು ತನ್ನನ್ನು ರಕ್ಷಿಸಿಕೊಳ್ಳಲು ಶಕ್ತಿ ಇಲ್ಲವೆಂಬ ಆಕಿಂಚಿನ್ಯವನ್ನು ವಿಜ್ಞಾಪಿಸಿ, ಕಾರ್ಪಣ್ಯವನ್ನು ತಿಳಿಸುವನು. ರಕ್ಷಿಸಬೇಕೆಂದು ಬೇಡುವಾಗ ಗೋಪ್ತೃತ್ವವರಣ ವ್ಯಕ್ತವಾಯಿತು. ವಸ್ತುವನ್ನು ಅವನಲ್ಲಿಟ್ಟು ನಿರ್ಭಯನಾಗಿರುವಾಗ ಆತ್ಮನಿಕ್ಷೇಪವು ಸೂಚಿತವಾಯಿತು. ಹೀಗೆ ತಾನು ಮಾಡಬೇಕಾದುದನ್ನು ಮಾಡಿ ನಿಶ್ಚಿಂತೆಯಿಂದ ಮಲಗುವಂತೆ, ಶರಣಾಗತಿ ಮಾಡಿದವನ ಕೃತಕೃತ್ಯತೆಯನ್ನು ಸೂಚಿಸಲಾಗಿದೆ. ಹೀಗೆ ಲೋಕದೃಷ್ಟಿಯಿಂದ ಕೂಡ ಐದು ಅಂಗ, ಒಂದು ಅಂಗಿ; ಒಟ್ಟು ಆರು ಅಂಗಗಳಿವೆ. ಇವೇ ಪ್ರಪತ್ತಿಯ ಪರಿಕರಗಳು.

## ಸಾಂಗ ಪ್ರಪತ್ತಿ

ಪ್ರಪತ್ತಿಗಿರುವ ಅಂಗಿ ಯಾವುದು ? ಇದಕ್ಕಿರುವ ಅಸಾಧಾರಣ ಲಕ್ಷಣಗಳೇನು ? ಇವನ್ನು ಅನುಷ್ಠಿಸುವ ಕ್ರಮ ಹೇಗೆ ? ಐಹಿಕ ಫಲವೇ ಆಗಲಿ, ಮೋಕ್ಷವೇ ಆಗಲಿ, ಅನನ್ಯ ಸಾಧ್ಯವಾದುದರಿಂದ, ಪರಮಾತ್ಮನ ಕೃಪೆಯಿಲ್ಲದೆ, ಸಾಧಿಸಲು ಸಾಧ್ಯವಿಲ್ಲ. ಈ ಫಲಸಾಧನ ಭರವನ್ನೆಲ್ಲ ಮುಂದೆ ಚೇತನನ ಪ್ರಯತ್ನದ ಅಪೇಕ್ಷೆಯಿಲ್ಲದೆ, ಸ್ವಾಮಿಯೇ ಸಾಧಿಸಿಕೊಡುವ ನೆಂಬ ಮಹಾ ವಿಶ್ವಾಸದಿಂದ, ರಕ್ಷಾಭರವನ್ನು ಅವನಲ್ಲಿ ಅರ್ಪಿಸುವ ಜ್ಞಾನ ವಿಶೇಷವೇ ಪ್ರಪತ್ತಿ.

ಮೋಕ್ಷಾರ್ಥಿಯಾದ ಅಧಿಕಾರಿಗೆ ಸಾಂಗಪ್ರಪದನದಲ್ಲಿ ಅಂಗಿ ಯಾವುದು ಎಂದರೆ, ಆಭರಣವನ್ನು ಅದರ ಯಜಮಾನನಿಗೆ ಧರಿಸಲು ಹಿಂತಿರುಗಿ ಕೊಡುವಂತೆ, ತನ್ನ ರಕ್ಷಣದಲ್ಲಿಯೂ, ಅದರ ಫಲದಲ್ಲಿಯೂ ತನಗೆ ಸಂಬಂಧವಿಲ್ಲ, ಅದು ಭಗವಂತನಿಗೆ ಸೇರಿದ್ದು ಎಂಬ ತಿಳಿವಳಿಕೆಯಿಂದ ಕೂಡಿದ ಆತ್ಮಸಮರ್ಪಣೆ. ಹೇಗೆಂದರೆ ಸ್ವಾಮಿಗೆ ಸೇರಿದ ಆಭರಣವು ಏನೋ ಕಾರಣದಿಂದ ತನ್ನಲ್ಲಿ ಸೇರಿದ್ದರೆ, ಅದನ್ನು ರಕ್ಷಿಸಲು ಅಸಮರ್ಥ ನಾಗಿ, ಆದನ್ನು ಪುನಃ ತನ್ನ ಸ್ವಾಮಿಯಲ್ಲಿಯೇ ಇಟ್ಟು ಅದನ್ನು ರಕ್ಷಿಸಿ ಕೊಂಡು ಬರುವಂತೆ ಬೇಡುವುದು. ಇದೇ ಭರಸಮರ್ಪಣ. ಇಂತಹ ರಕ್ಷಾ ಭರಸಮರ್ಪಣದಲ್ಲಿ ಆತ್ಮಸಮರ್ಪಣ, ಫಲಸಮರ್ಪಣ ಇರಬೇಕು ಇದೇ ಅಂಗಿಯ ಸ್ವರೂಪ.

ಆಭರಣವನ್ನು ರಕ್ಷಿಸಲು ಸ್ವಾಮಿಯಲ್ಲಿ ಅರ್ಪಿಸಬಹುದು ; ಆತ್ಮನನ್ನು ಸಮರ್ಪಿಸುವುದು ಹೇಗೆ ? ಅದು ಕಣ್ಣಿಗೆ ಕಾಣುವುದಿಲ್ಲ ವಲ್ಲಾ ? ಎಂದರೆ ಪರಮಾತ್ಮನಿಗೆ ತಾನು ದಾಸಭೂತನೆಂಬ ಭಾವವನ್ನು ವ್ಯಕ್ತಪಡಿಸುವ ವ್ಯಾಪಾರ ವಿಶೇಷವೇ ಇದು. ಅತ್ಯಂತ ಪಾರತಂತ್ರ್ಯದಿಂದ ಕೂಡಿದ ಶೇಷತ್ವದ ಅನುಸಂಧಾನವೇ ಆತ್ಮಸಮರ್ಪಣ. ಇಂತಹ ಆತ್ಮ ನಿಕ್ಷೇಪವು, ಸ್ವರೂಪನ್ಯಾಸ, ರಕ್ಷಾಭರನ್ಯಾಸ, ಫಲನ್ಯಾಸವೆಂಬ ಅಂಶ ಗಳನ್ನೊಳಗೊಂಡಿದೆ. "ಸ್ವಾತ್ಮಾನಂ ಮಯಿ ನಿಕ್ಷಿಪೇತ್", "ಆತ್ಮಾ ತ್ಮೀಯ ಭರನ್ಯಾಸೋ ಹ್ಯಾತ್ಮ ನಿಕ್ಷೇಪ ಉಚ್ಯತೇ" ಮುಂತಾದ ಪ್ರಮಾಣ ಗಳಿಂದ ಇದನ್ನು ನಿರೂಪಿಸಬಹುದು.

ತದಹಂ ತ್ವದೃತೇನ ನಾಥವಾನ್ಮದೃತೇ ತ್ವಂ ದಯನೀಯ ವಾನ್ನ ಚ।
ವಿಧಿನಿರ್ಮಿತಮೇತದನ್ವಯಂ ಭಗವನ್! ಪಾಲಯ ಮಾಸ್ಮ ಜೀಹಪಃ॥
ಎಂದು ಯಾಮುನ ಮುನಿಗಳು ತಿಳಿಸಿದ್ದಾರೆ.

ಹೇಯಗುಣರಹಿತನಾದ, ಕಲ್ಯಾಣಗುಣಾಕರನಾಗಿರುವ ಹೇ! ಸ್ವಾಮಿಯೇ! ನಿನ್ನನ್ನು ಬಿಟ್ಟರೆ ನನಗೆ ಶೇಷಿಯಾಗಿ, ಸ್ವಾಮಿಯಾಗಿ, ರಕ್ಷಕನಾಗಿರುವವನು ಯಾರೂ ಇಲ್ಲ. ನನ್ನನ್ನೂ, ನನಗೆ ಸಮಾನರಾದವರನ್ನೂ ನೀನು ತೊರೆದರೆ, ನಿನ್ನ ದಯೆಗೆ ಪಾತ್ರರಾಗಿ, ಶೇಷರಾಗಿ, ದಾಸರಾಗಿ, ರಕ್ಷ್ಯವಾದ ಚೇತನ ವರ್ಗವೇ ಇಲ್ಲ. ಇಂತಹ ನಮ್ಮಿಬ್ಬರ ಸಂಬಂಧವು ನಿನ್ನ ಸಂಕಲ್ಪದಿಂದ ನಿಯಮಿತವಾದುದು. ಆದುದರಿಂದ ಈ ಸಂಬಂಧವನ್ನು ನೀನು ಕಾಪಾಡಿಕೊಳ್ಳಬೇಕು.

ಅಚೇತನವಾದ ಪ್ರತಿಮೆಗೆ ಆಭರಣ ತೊಡಿಸಿ ಅಲಂಕಾರಮಾಡಿ ಆನಂದಪಡುವುದಕ್ಕೂ, ಚೇತನವಾದ ಒಂದು ಗಿಳಿಯನ್ನು ಪಂಜರದಲ್ಲಿಟ್ಟು ಹಾಲು ಹಣ್ಣುಕೊಟ್ಟು, ತನ್ನಿಷ್ಟಾನುಸಾರ ಹಾರುವುದಕ್ಕೆ ಬಿಟ್ಟು ಅದರ ಸಂತೋಷ ನೋಡಿ ಆನಂದಪಡುವುದಕ್ಕೂ ಏನೂ ವ್ಯತ್ಯಾಸವಿಲ್ಲ. ಪ್ರತಿಮೆಯ ಮತ್ತು ಗಿಳಿಯ ಯಜಮಾನನು ಹೇಗೆ ಸಂತೋಷಪಡುವನೋ ಹಾಗೆಯೇ ಅಚಿತ್ತುಗಳ ಸೌಂದರ್ಯಾದಿಗಳಿಂದಲೂ ಚೇತನವರ್ಗದ ಸುಖ ದುಃಖ ಉಪ ಭೋಗಗಳಿಂದಲೂ ಸರ್ವೇಶ್ವರನು ಆನಂದಪಡುವನು. ಇದೊಂದು ಬಗೆಯ ಲೀಲೆ. ಇಂತಹ ಲೀಲೆ ಪರಮಾತ್ಮನಿಗೆ ವಿನಹ ಮತ್ತಾರಿಗೂ ಇಲ್ಲ. ಇದನ್ನು "ಲೋಕವತ್ತು ಲೀಲಾ ಕೈವಲ್ಯಂ" ಎಂಬ ಬ್ರಹ್ಮಸೂತ್ರದ ಮೂಲಕ ಉಪಪಾದಿಸಲಾಗಿದೆ.

ಸಾಂಗ ಪ್ರಪತ್ತಿಯ ಅನುಷ್ಠಾನ ಕ್ರಮವನ್ನು ಹೀಗೆ ಸಂಗ್ರಹಿಸಬಹುದು. " ಹೇ! ಸರ್ವಲೋಕ ಶರಣ್ಯನೇ! ಇನ್ನುಮುಂದೆ ಚೇತನನಾದ ನಾನು ಅನುಕೂಲನಾಗಿಯೇ ವರ್ತಿಸುವೆನು. ಪ್ರತಿಕೂಲಾಚರಣೆ ಮಾಡುವುದಿಲ್ಲ. ನೀನೊಬ್ಬನೇ ರಕ್ಷಕನು. ಇನ್ಯಾರೂ ಇಲ್ಲ. ನೀನೇ ರಕ್ಷಿಸುವಿ ಎಂಬ ಸಂಪೂರ್ಣ ವಿಶ್ವಾಸವನ್ನು ನಿನ್ನಲ್ಲಿಟ್ಟಿರುವೆನು. ನಾನು ಅಕಿಂಚನನು. ನನಗಿನ್ನಾರೂ ಗತಿಯಿಲ್ಲ. ಇಂತಹ ಐದು ಅಂಗಗಳ ಜ್ಞಾನದಿಂದ ಈ ಆತ್ಮನನ್ನು ನಿನ್ನಲ್ಲಿ ಅರ್ಪಿಸುವೆನು. ಇದನ್ನು ರಕ್ಷಿಸುವ ಭಾರವು

ನಿನ್ನದೇ. ಉಪಾಸನಾದಿ ಉಪಾಯಗಳಲ್ಲಿ ನಾನು ಅಶಕ್ತನು. ಸ್ವಾಮಿಯಾದ ನೀನೆ ಈ ಉಪಾಯ ಸ್ಥಾನದಲ್ಲಿ ನಿಂತು ಮೋಕ್ಷೋಪಾಯವನ್ನು ಸಾಧಿಸಿಕೊಡು. ಇನ್ನುಮುಂದೆ ನನ್ನ ರಕ್ಷಣೆಯ ವಿಷಯದಲ್ಲಿ ನಾನು ಯಾವ ಪ್ರಯತ್ನವನ್ನೂ ಮಾಡುವುದಿಲ್ಲ. ಇದರಲ್ಲಿ ನನಗೆ ಯಾವ ಸ್ವಾತಂತ್ರ್ಯವೂ ಇಲ್ಲ. ಇದರ ಫಲದಲ್ಲಿ ನನಗೆ ಯಾವ ಅಧಿಕಾರವೂ ಇಲ್ಲ. ಅವೆಲ್ಲವೂ ಸರ್ವಶೇಷಿಯಾದ ನಿನಗೇ ಸೇರಿದ್ದು. ಇಂತಹ ಸಾಂಗ ಪ್ರಪದನದ ಅನುಷ್ಠಾನದಲ್ಲಿ ನನಗೆ ಯಾವ ಕರ್ತೃತ್ವವೂ ಇಲ್ಲ" ಎಂದು ಅನುಸಂಧಾನ ಮಾಡಿ, ದ್ವಯ ಮಂತ್ರೋಚ್ಚಾರಣೆಯಿಂದ ಪ್ರಪತ್ತಿ ಮಾಡಬೇಕು. ಹೀಗೆಂದು ಸ್ವಾಮಿ ಶ್ರೀ ನಿಗಮಾಂತ ಮಹಾದೇಶಿಕರು ಉಪದೇಶಮಾಡಿ, ಪ್ರಪತ್ತಿಯ ವಿಶ್ವಧರ್ಮವನ್ನು ವ್ಯಕ್ತಪಡಿಸಿದ್ದಾರೆ

ಸಾಂಗ ಪ್ರಪದನದ ಆಚರಣೆ, ಸ್ವನಿಷ್ಠೆ, ಉಕ್ತಿನಿಷ್ಠೆ, ಆಚಾರ್ಯನಿಷ್ಠೆ-ಎಂದು ಮೂರು ವಿಧ. ಆಚಾರ್ಯಾನುಗ್ರಹಪೂರ್ವಕ ಗುರುಪರಂಪರೆಯನ್ನು ಅನುಸಂಧಾನಮಾಡಿ ಲಕ್ಷ್ಮೀ ಪ್ರಪತ್ತಿಯ ಮೂಲಕ, ಶ್ರೀ ಭಾಷ್ಯಕಾರರು ತಿಳಿಸಿರುವಂತೆ, ದ್ವಯ ಮಂತ್ರೋಚ್ಚಾರಣೆಮಾಡಿ ಲೋಕ ದಂಪತಿಗಳನ್ನು ಸ್ಮರಿಸಿ, ಅವರ ಅಡಿದಾವರೆಗಳಲ್ಲಿ ಪಂಚಾಂಗಯುತವಾದ ಪ್ರಪತ್ತಿಮಾಡುವುದು ಅಂದರೆ ನೇರವಾಗಿ ಪರಮಾತ್ಮನಲ್ಲಿ ಪ್ರಾರ್ಥಿಸುವುದು ಸ್ವನಿಷ್ಠೆ.

ಶ್ರೀರಂಗಾದಿ ದಿವ್ಯ ಕ್ಷೇತ್ರಗಳ ಸ್ವಾಮಿಸನ್ನಿಧಿಯಲ್ಲಿ, ಆಚಾರ್ಯರಿಂದ ಉಪದೇಶವಾದಂತೆ, ಅವರು ಹೇಳಿದಂತೆ ಉಚ್ಚರಿಸಿ, ಪುರುಷಕಾರ ಪ್ರಪತ್ತಿ ಮಾಡಿ ಅದರ ಅಂಗಗಳ ಮೂಲಕ ಪ್ರಾರ್ಥಿಸಿ "ಸ್ವಾಮಿ! ನಾನು ಉಪಾಸನಕ್ಕೆ ಅಶಕ್ತನು. ಉಪಾಯ ಸ್ಥಾನದಲ್ಲಿ ನೀನೇ ನಿಂತು ಸರ್ವವನ್ನೂ ನಿರ್ವಹಿಸುವ ಭಾರ ನಿನ್ನದು. ಈ ರಕ್ಷಾಫಲವು ನಿನ್ನದೇ ವಿನಹ ನನ್ನದಲ್ಲ. ಇದರ ಕರ್ತೃತ್ವ ನನಗಿಲ್ಲ. ಈ ಪ್ರಪತ್ತಿಯೂ ಕೂಡ ನಿನ್ನ ಕೃಪೆಗೆ ಪಾತ್ರನಾಗುವುದಕ್ಕೆ ವಿನಹ ಇದರ ಫಲದ ಆಸೆ ನನಗಿಲ್ಲ, ಎಂದು ಆಚಾರ್ಯರು ಹೇಳಿಕೊಟ್ಟಂತೆ ಉಚ್ಚರಿಸಿ ಪ್ರಾರ್ಥನೆ ಮಾಡುವುದು ಉಕ್ತಿನಿಷ್ಠೆ.

ಆಚಾರ್ಯನಿಷ್ಠೆ ಎಂಬುದು ಗುರುಗಳ ಶಿಷ್ಯರಾಗಿ ಅವರ ಮೂಲಕ ಪರಮಾತ್ಮನಲ್ಲಿ ಪ್ರಾರ್ಥಿಸುವುದು. ಈ ಕ್ರಮದಲ್ಲಿ ನಾನು ಎಂದು ಇರುವ ಕಡೆ ಈತನು ಎಂಬ ಶಬ್ದವನ್ನು ಪ್ರಯೋಗಿಸಿ ಆಚಾರ್ಯರು ಪ್ರಪತ್ತಿ ಮಾಡು

ವರು. ಹೀಗೆ ಆತ್ಮಾತ್ಮೀಯ ಎಂದು ಹೇಳುವುದರಲ್ಲಿ ಭರನ್ಯಾಸವನ್ನು ಅಪೇಕ್ಷಿಸುವ ಶಿಷ್ಯನೂ ಅಂತರ್ಗತನಾಗಿರುವನು.

## ಪ್ರಪನ್ನನು ಕೃತಕೃತ್ಯ

ಪರಮಾತ್ಮನ ಸರ್ವಶಕ್ತಿತ್ವ, ಸರ್ವಜ್ಞತ್ವ ಮತ್ತು ಸಹಜ ಕಾರುಣಿಕತ್ವ ಇವು ಮೂರೂ ಚೇತನನನ್ನು ನಿರ್ಭಯ, ನಿರ್ಭರನನ್ನಾಗಿಮಾಡುವುದು. ಪ್ರಪತ್ತಿಯಿಂದ ಯಾವ ಪ್ರಯೋಜನ ಬೇಕೋ ಅದು ಸಿದ್ಧವಾದುದರಿಂದ ಪ್ರಪನ್ನನು ಇನ್ಯಾವ ಉಪಾಯವನ್ನೂ ಅವಲಂಬಿಸಬೇಕಾಗಿಲ್ಲ. ಒಂದುಸಲ ಮಾಡಿದ ಪ್ರಪತ್ತಿಯಿಂದ ಪರಮಾತ್ಮನು ಎಲ್ಲವನ್ನೂ ನಡೆಸಿಕೊಡುವನು. ಫಲವನ್ನು ಕೊಡುವವನು ಪರಮಾತ್ಮನೇ ಆದುದರಿಂದ ಚೇತನನು ನಿರ್ಭರನು. ಪರಮಾತ್ಮನು "ಮಾಶುಚಃ" ಎಂದು ಹೇಳಿ ಧೈರ್ಯವಿತ್ತಿರುವುದರಿಂದ ಚೇತನನು ನಿರ್ಭಯನಾಗಿರಬಹುದು. ಅನೇಕ ಜನ್ಮಗಳು ಕಳೆದ ಹೋದುವು ಅಜ್ಞಾನದಿಂದ ಅವನಿಗೆ ಉಪಾಯಹೊಳೆದಿರಲಿಲ್ಲ. ಸುಕೃತ ವಿಶೇಷದಿಂದ ಈಗ ಹೊಳೆಯಿತು. ಅನುಷ್ಠಿಸಿದನು. ಇನ್ನು ನಿರ್ಭರನಾಗಿರಬಹುದು.

ಜನ್ಮ ಜನ್ಮಾಂತರಗಳಲ್ಲಿ ಮಾಡಿದ ಪಾಪಗಳೆಲ್ಲವೂ, ಕ್ಷಣಕಾಲದ ಪ್ರಪತ್ತಿಯಿಂದ ನಾಶವಾಗಬಲ್ಲುದೇ ? ಎಂದರೆ "ಮಾಮೇಕಂ ಶರಣಂ ವ್ರಜ", ಅಹಂತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ" ಎಂದು ಸ್ವಾಮಿಯು ಅಭಯವಿತ್ತಿರುವುದರಿಂದ ಇಂತಹ ಶಂಕೆಗೆ ಕಾರಣವಿಲ್ಲ. ಹೀಗೆ ಪ್ರಪನ್ನನು ತಾನು ಕೃತಕೃತ್ಯನೆಂದೂ, ಕೃತಾರ್ಥನೆಂದೂ ತಿಳಿದು ನಿರ್ಭಯನಾಗಿರಬಹುದು. ಅಂದರೆ ನಿತ್ಯನೈಮಿತ್ತಿಕಾದಿ ಕರ್ಮಗಳನ್ನು ಮಾಡಲೇ ಬೇಕು. "ಅಹರಹಸ್ಸಂಧ್ಯಾಮುಪಾಸೀತ" ಎಂಬ ಶ್ರುತಿ ವಚನದಂತೆ ಚೇತನನು ಈ ಕರ್ಮಗಳನ್ನು ಭಗವತ್ಪ್ರೀತಿಗಾಗಿ, ಭಗವತ್ಕೈಂಕರ್ಯ ರೂಪದಲ್ಲಿ, ಫಲಾಭಿಸಂಧಿರಹಿತನಾಗಿ ಸಾತ್ವಿಕತ್ಯಾಗ ಪೂರ್ವಕಮಾಡಬೇಕು.

## ಸ್ವರೂಪ ನಿಷ್ಠೆ

ಪ್ರಪನ್ನನಾದವನಿಗೆ ಸ್ವರೂಪ ನಿಷ್ಠೆ, ಉಪಾಯ ನಿಷ್ಠೆ, ಪುರುಷಾರ್ಥ ನಿಷ್ಠೆ–ಇವು ಮೂರರ ಅರಿವು ಇರಬೇಕು. ಸ್ವರೂಪ ನಿಷ್ಠೆ ಇದ್ದರೆ ಆತ್ಮವು ಪರಿಶುದ್ಧವಾಗುವುದು. ಉಪಾಯ ನಿಷ್ಠೆಯಿದ್ದರೆ ತಾನು ಮಾಡುವ

ಉಪಾಯ ಸರ್ವೋತ್ತಮವಾದುದೆಂಬ ಭಾವನೆ ಬರುವುದು. ಇನ್ನಾವುದನ್ನೂ ಅವಲಂಬಿಸಬಾರದೆಂಬ ತಿಳುವಳಿಕೆಯುಂಟಾಗುವುದು. ಪುರುಷಾರ್ಥ ನಿಷ್ಠೆ ಇದ್ದರೆ ಪರಮಾತ್ಮನ ಕೈಂಕರ್ಯವೇ ತನಗೆ ಅತ್ಯಗತ್ಯವೆಂಬ ಭಾವನೆ ಬರುವುದು. ಈ ಮೂರು ನಿಷ್ಠೆಯಿರುವ ಪ್ರಪನ್ನನು, ಯಾವ ಪ್ರತಿಕೂಲಾಚರಣೆ ಮಾಡದೆ ಮುಕ್ತ ತುಲ್ಯನಾಗಿರುವನು.

ಸ್ವರೂಪನಿಷ್ಠೆಯಿಂದ ಐದು ಪ್ರಯೋಜನಗಳುಂಟಾಗುವುವು. ಅವಮಾನವುಂಟಾಗುವ ಸಂದರ್ಭದಲ್ಲಿ, ಅದು ದೇಹಕ್ಕೆ ಸಂಬಂಧಪಟ್ಟದ್ದು. ಆತ್ಮಕ್ಕೆ ಸಂಬಂಧಪಟ್ಟುದಲ್ಲ ಎಂದು ಕೋಪ, ದುಃಖವಿಲ್ಲದಿರುವುದು. ಹೀಗೆ ಅವಮಾನಪಡಿಸುವವನು ವಿವೇಕಶೂನ್ಯನಾಗಿ ಅಕೃತ್ಯಮಾಡಿದನಲ್ಲಾ ಎಂಬ ಪರಿತಾಪವುಂಟಾಗುವುದು. ಯಾರಾದರೂ ನಿಂದಿಸಿ ದೋಷಾರೋಪಣೆ ಮಾಡಿದರೆ, ಆಗ ಪ್ರಪನ್ನನು ಅದನ್ನು ಉಪಕಾರವೆಂದು ತಿಳಿದು ಕೃತಜ್ಞತೆ ತೋರಿಸುವುದು. ಚೇತನರೆಲ್ಲರೂ ಭಗವಂತನಿಗೆ ಅಧೀನವಾಗಿ ಪರತಂತ್ರರು. ಹೀಗಿರುವಾಗ ಒಬ್ಬ ಚೇತನನು ಇನ್ನೊಬ್ಬ ಪ್ರಪನ್ನನಿಗೆ ಪರಿಭವವುಂಟು ಮಾಡಬೇಕೆಂದಾಗ ಇದನ್ನು ಮಾಡುವವನು ಸ್ವತಂತ್ರನಾದ ಸ್ವಾಮಿಯು ತನ್ನ ಪ್ರಾರಬ್ಧಶೇಷವು ಹಾಗೆ ಮಾಡಿಸುತ್ತದೆ ಎಂದು ತಿಳಿಯಬೇಕು.

ಹಾಗೆಯೇ ಉಪಾಯನಿಷ್ಠೆಯೂ ಐದು ವಿಧವಾಗಿವೆ. ಪರಮಾತ್ಮನನ್ನು ಬಿಟ್ಟರೆ ತನಗೆ ಇನ್ನಾರೂ ರಕ್ಷಕರಿಲ್ಲ ಎಂದು ತಿಳಿಯುವುದು. ಮರಣವನ್ನು ಪ್ರಿಯ ಅತಿಥಿಯಂತೆ ಭಾವಿಸುವುದು, ಸರ್ವಶಕ್ತನಾದ ಶ್ರಿಯಃಪತಿಯನ್ನು ಆಶ್ರಯಿಸಿದ ಮೇಲೆ, ತನಗೆ ಯಾವ ಭಯವೂ ಇಲ್ಲವೆಂದು ತಿಳಿಯುವುದು ಭರನ್ಯಾಸದಲ್ಲಿ ತನ್ನ ಪ್ರಯತ್ನವೇನೂ ಇಲ್ಲ. ಸ್ವಾಮಿಯ ಕೃಪೆಯೇ ಮುಖ್ಯ ಎಂದು ಭಾವಿಸುವುದು. ಉಪಾಯಾನುಷ್ಠಾನದಲ್ಲಿ ತಾನು ಪರತಂತ್ರನು. ಅದರ ಫಲ ಪರಮಾತ್ಮನಿಗೇ ಸೇರಿದ್ದು ಎಂದು ಅರಿಯುವುದು.

ಪುರುಷಾರ್ಥನಿಷ್ಠೆ ಯಾವುವೆಂದರೆ-ದೇಹಯಾತ್ರೆ ವಿಷಯದಲ್ಲಿ ತುಂಬ ಶ್ರಮವಹಿಸದೆ ಇರುವುದು. ಒಂದುವೇಳೆ ಕ್ಲೇಶವುಂಟಾದರೆ ಅದು ಈಶ್ವರ ಸಂಕಲ್ಪ ಎಂದು ತಿಳಿಯುವುದು. ಶಾಸ್ತ್ರವಿರುದ್ಧವಲ್ಲದ, ತಾನಾಗಿಯೇ



ಶ್ರೀ ಸಂಪತ್ಕುಮಾರಸ್ವಾಮಿ, ಮೇಲುಕೋಟೆ

ಬಂದ ಐಹಿಕ ಸುಖಗಳನ್ನು ಅನುಭವಿಸುವುದು. ಐಹಿಕ ಸುಖದುಃಖಗಳಲ್ಲಿ ಹರ್ಷಶೋಕಗಳನ್ನು ತ್ಯಜಿಸುವುದು. ಪ್ರಾಪ್ಯರುಚಿ, ಪ್ರಾಪ್ತಿತ್ವರೆಯನ್ನು ತೋರಿಸುವುದು. ಇವು ಐದೂ ಇದ್ದರೆ, ಅಂತಹ ಪ್ರಪನ್ನನು ಪುರುಷಾರ್ಥನಿಷ್ಠನೆಂದು ತಿಳಿಯಬೇಕು.

ಮೇಲೆ ವಿವರಿಸಿದ ಮೂರು ನಿಷ್ಠೆಯನ್ನು ಯಾಮುನೇಯರು ತಮ್ಮ ಸ್ತೋತ್ರರತ್ನದಲ್ಲಿಯೂ, ಭಾಷ್ಯಕಾರರು ವೈಕುಂಠಗದ್ಯದಲ್ಲಿಯೂ ಬಹು ಚೆನ್ನಾಗಿ ಪ್ರತಿಪಾದಿಸಿದ್ದಾರೆ. ಮೂರು ರಹಸ್ಯಗಳಲ್ಲಿಯೂ ಇವು ಉಪಪಾದಿತವಾಗಿವೆ. ಹೀಗೆ ಈ ಮೂರು ನಿಷ್ಠೆಯ ಅರಿವು ಇರುವ ಚೇತನನಿಗೆ ಮರಣ ಭೀತಿ ಇರುವುದಿಲ್ಲ. ಭಯ, ಪ್ರೀತಿ ಹೇತುಗಳುಂಟಾಗುವುದಿಲ್ಲ. ಆದರೆ ಭಾಗವತಾಪಚಾರನಾಗದಂತೆ ಅವನು ಬಹು ಎಚ್ಚರದಿಂದಿರಬೇಕು. ಅನ್ಯ ದೇವತಾ ಭಜನವಿರಬಾರದು. ಇಂತಹ ಸ್ವನಿಷ್ಠೆಯನ್ನು ತಿಳಿದಿರುವ ಪ್ರಪನ್ನನ ಪರಿಸ್ಥಿತಿಯು ನಿತ್ಯಸೂರಿಗಳ ಸ್ಥಿತಿಗೇನೂ ಕಡಿಮೆಯಾದುದಲ್ಲ ಎಂದು ಆಚಾರ್ಯರು ತಿಳಿಸಿದ್ದಾರೆ.

## ಉತ್ತರ ಕೃತ್ಯ

ಪ್ರಪನ್ನನು ಕಣ್ಣಿಗೆ ಕಾಣುವ ದೇಹಯಾತ್ರೆಗಾಗಲಿ, ಕಾಣದೇ ಇರುವ ಪರಮಪದ ಪ್ರಾಪ್ತಿಗಾಗಲಿ ಮಾಡತಕ್ಕದ್ದೇನೂ ಇಲ್ಲ. ಇವುಗಳ ಭಾರವನ್ನೆಲ್ಲಾ ಸ್ವಾಮಿಯಲ್ಲಿ ಅರ್ಪಿಸಿ ಬಿಟ್ಟಿರುವುದರಿಂದ, ಇವುಗಳ ವಿಷಯದಲ್ಲಿ ಅವನ ಕರ್ತವ್ಯಾಂಶವೇನೂ ಇಲ್ಲ. ದೇಹಾವಸಾನ ಕಾಲದವರೆಗೆ, ಪರಿಶುದ್ಧ, ವಿಧಿವಿಹಿತ, ಭಾಗವತ ಕೈಂಕರ್ಯವನ್ನು, ಭಗವತ್ಪ್ರೀತಿಗಾಗಿ ವರ್ಣಾಶ್ರಮರೀತ್ಯಾ ಮಾಡುವುದು ; ಭಗವದ್ಗುಣಾನುಭವ ಸಂತೋಷಾರ್ಥವಾಗಿ ಸಾಧುಸಜ್ಜನರೊಡನಿದ್ದು ಅಧ್ಯಾತ್ಮ ವಿದ್ಯೆ ತಿಳಿಯುವುದು, ಇತರರಿಗೂ ತಿಳಿಸುವುದು, ಆಳ್ವಾರಾಚಾರ್ಯರ ಸೂಕ್ತಿಗಳನ್ನು ಹೇಳುತ್ತಾ, ಕೇಳುತ್ತಾ ಕಾಲಯಾಪನೆ ಮಾಡುತ್ತಿರುವುದು.

ಪ್ರಪನ್ನನ ಉತ್ತರ ಕೃತ್ಯಗಳು ಯಾವುವೆಂದರೆ, ತನಗೆ ತಿಳಿಯದ ಅಂಶಗಳನ್ನು ಭಾಗವತೋತ್ತಮರಿಂದ ಕೇಳಿ ತಿಳಿಯುವುದು. ಸಾಧು ಸಜ್ಜನರ ಸಂಗದಲ್ಲಿರುವುದು, ಇತರರನ್ನು ನಿಕೃಷ್ಟಭಾವನೆಯಿಂದ ನೋಡ

ದಿರುವುದು. ಅವತಾರ ರಹಸ್ಯಗಳಿಂದ ಸಿದ್ಧವಾದ ಭಗವಂತನ ಸೌಲಭ್ಯಾನುಸಂಧಾನದಿಂದ ಧೈರ್ಯಹೊಂದಿ, ಆಹಾರನಿಯಮ, ಇಂದ್ರಿಯಜಯ, ಭಗವದ್ಭಾಗವತ ಕೈಂಕರ್ಯ—ಇತ್ಯಾದಿಗಳನ್ನು ಆಚರಿಸುವುದು. ನ್ಯಾಯವಾಗಿ ಆರ್ಜಿಸಿದ ದ್ರವ್ಯದಿಂದ ಕೈಂಕರ್ಯ ಮಾಡುವುದು. ಪ್ರತ್ಯುಪಕಾರ ಅಥವಾ ಸ್ವರೂಪಲಾಭ ದೃಷ್ಟಿಯಿಂದ ಮಾಡದಿರುವುದು. ಇವೆಲ್ಲವೂ ಆಚಾರ್ಯ ಸಂಬಂಧದಿಂದ ಉಂಟಾಯಿತೆಂದು ಆಚಾರ್ಯರಲ್ಲಿ ಕೃತಜ್ಞತೆ ತೋರಿಸುವುದು. ಇಂತಹ ಆಚಾರ್ಯ ಸಂಬಂಧಕ್ಕೆ ಭಗವತ್ಕೃಪೆಯೇ ಕಾರಣವೆಂದು ತಿಳಿಯುವುದು.

ಸಮುದ್ರದ ಉಪ್ಪುನೀರು ಸೂರ್ಯನ ಶಾಖದಿಂದ ಮೇಘಗಳನ್ನು ಸೇರಿ, ಕುಡಿಯಲು ಯೋಗ್ಯವಾದ ಸಿಹಿ ನೀರಾಗಿ ಪುನಃ ಹೇಗೆ ಬರುವುದೋ ಹಾಗೆ ಶಾಸ್ತ್ರರೀತಿಯಲ್ಲಿ ಅರ್ಚಾವತಾರಿಯಾಗಿ ಪ್ರತಿಷ್ಠಿತವಾದ ಪರಮಾತ್ಮನ ದಿವ್ಯ ಮಂಗಳ ವಿಗ್ರಹವು, ಷಾಡ್ಗುಣ್ಯ ಪರಿಪೂರ್ಣವಾಗಿಯೂ, ಕಲ್ಯಾಣಗುಣ ಪೂರ್ಣವಾಗಿಯೂ ಇದೆ ಎಂದು ತಿಳಿಯಬೇಕು ಇಂತಹ ಅರ್ಚಾ ಮೂರ್ತಿಗಳನ್ನು ಆಶ್ರಯಿಸುವುದರಿಂದ ಸಮಸ್ತ ಪಾಪಗಳು ನಾಶವಾಗುವುವು. ಅವನ್ನು ಸೇವಿಸುವುದರಿಂದ ಸರ್ವ ಶ್ರೇಯಸ್ಸುಂಟಾಗುವುದು. ಅರ್ಚಾಮೂರ್ತಿಗಳ ಮಹಾತ್ಮೆಯು ವಿಷ್ವಕ್ಸೇನ ಸಂಹಿತೆ, ಶಾಂಡಿಲ್ಯ ಸಂಹಿತೆಗಳಲ್ಲಿ ವಿವರಿಸಲ್ಪಟ್ಟಿವೆ.

ಅರ್ಚಾಮೂರ್ತಿಯನ್ನು ದರ್ಶನಮಾಡಿ ಪೂಜಿಸುವಾಗ ಈ ರೀತಿಯಾದ ಅನುಸಂಧಾನ ಇರಬೇಕೆಂದು ಉಪದೇಶಿಸಲಾಗಿದೆ. ಆಶ್ರಯೋಚಿತವಾದ ಸಮಸ್ತ ಕಲ್ಯಾಣಗುಣಗಳು ಆ ಬಿಂಬದಲ್ಲಿದೆ ಎಂದು ತಿಳಿಯುವುದು. ಆಶ್ರಿತನ ಸಮಸ್ತ ದೋಷವನ್ನು ಪರಿಹರಿಸುವ ಪಾವನಶಕ್ತಿ ಅದರಲ್ಲಿದೆ ಎಂದು ಭಾವಿಸುವುದು. ಆಶ್ರಿತನ ಎಲ್ಲ ಭ್ರಮೆಯನ್ನು ನಿವಾರಿಸುವ ಶಕ್ತಿ ಅಲ್ಲಿದೆ ಎಂದು ಭಾವಿಸುವುದು. ಆಶ್ರಿತನ ಪಾರತಂತ್ರ್ಯವೂ, ಭಕ್ತನನ್ನು ಆಕರ್ಷಿಸುವ ಮಹಾತ್ಮೆ ಅಲ್ಲಿದೆ ಎಂದು ನಂಬುವುದು.

ಹೀಗೆ ಉದಾರಿಯಾಗಿ, ಕೃಪಾಪೂರ್ಣನಾಗಿ, ಪರಮೋಪಕಾರಿಯಾಗಿ ಜ್ಞಾನಪ್ರದನಾಗಿ, ಸ್ವಯಂ ಉಪಾಯಭೂತನಾಗಿ ಇರುವ ಅರ್ಚಾಮೂರ್ತಿ

ಸ್ವಾಮಿಯ ಸನ್ನಿಧಿಯಲ್ಲಿ, ಚೇತನನು ಮಾಡುವ ಸೇವೆಯು ಎಂತಹುದಾಗಿರಬೇಕೆಂದರೆ—ತುಂಬ ಪ್ರಿಯನಾದ ಪತಿಯನ್ನು ಪತಿವ್ರತೆಯಾದ ಪತ್ನಿಯು, ಪ್ರೀತಿ, ಭಕ್ತಿ, ವಿಶ್ವಾಸಗಳಿಂದ ಉಪಚರಿಸುವಂತೆ ಸೇವೆ ಮಾಡಬೇಕು. ತಾಯಿಯು, ಸ್ತನ್ಯಪಾನಮಾಡುವ ಮಗುವನ್ನು ಎಂತಹ ವಾತ್ಸಲ್ಯದಿಂದ ಕಾಣುವಳೋ, ಆಚಾರ್ಯನನ್ನು ಶಿಷ್ಯನು ಎಂತಹ ಭಕ್ತಿಯಿಂದ ಉಪಚರಿಸುವನೋ, ಹಾಗೆಯೇ ಅರ್ಚಾರೂಪಿಯಾದ ಶ್ರಿಯಃಪತಿಯನ್ನು ಉಪಚರಿಸಬೇಕೆಂದು ಅನೇಕ ಪ್ರಮಾಣಗಳಿಂದ ಉದಹರಿಸಲಾಗಿದೆ.

ರಾಜಭೃತ್ಯನು ರಾಜನಲ್ಲಿ ವಿಜ್ಞಾಪಿಸಿಕೊಳ್ಳುವಂತೆ ಚೇತನನು ಅರ್ಚಾಮೂರ್ತಿಯಲ್ಲಿ ವಿಜ್ಞಾಪಿಸಿಕೊಂಡು, ನಾನಾವಿಧ ಬಂಧುತ್ವಕ್ಕನುಗುಣವಾಗಿ ಸೇವೆ ಮಾಡಬೇಕು. ಹೀಗೆ ಮಾಡುವ ಸರ್ವವಿಧ ಲೌಕಿಕ, ವೈದಿಕ ಕರ್ಮಗಳನ್ನು ಸ್ವಾಮಿಯಲ್ಲಿ ಅರ್ಪಿಸಬೇಕು. ಜೀವನು ಗಳಿಸಿದ ಹಣ, ಕೊಂಡ ಬಟ್ಟೆ, ಮಾಡಿಸಿದ ಆಭರಣ, ಸಿದ್ಧಪಡಿಸಿದ ಆಹಾರ ಪದಾರ್ಥ ಎಲ್ಲವನ್ನೂ ಅರ್ಚಾಮೂರ್ತಿಯ ಸನ್ನಿಧಿಯಲ್ಲಿ ಪ್ರತಿದಿನವೂ ಅರ್ಪಿಸಿ, ಅನಂತರ ಉಪಯೋಗಿಸಬೇಕು. ಧರ್ಮರೀತಿಯಲ್ಲಿ ಸಂಪಾದನೆ ಮಾಡಿದ ಹಣದಿಂದ ಮಾಡುವ ಸೇವೆಯನ್ನು ಪರಮಾತ್ಮನು ಕೈಕೊಂಡು ಪ್ರೀತನಾಗುತ್ತಾನೆಯೇ ವಿನಹ, ಅನ್ಯಾಯವಾಗಿ ಬಂದ ಹಣದಿಂದ ಮಾಡಿದ ಸೇವೆಯಿಂದ ಅವನು ಸುಪ್ರೀತನಾಗುವುದಿಲ್ಲ.

ಮಹಾ ಪಾಪಿಯಾಗಿ, ರಾಜ್ಯಾಡಳಿತದಿಂದ ದೂರನಾದ ನೀಚ ಕ್ಷತ್ರಿಯನೆನಿಸಿದ ಕ್ಷತ್ರಬಂಧುವೂ, ಅನೇಕ ಪುಣ್ಯಕಾರ್ಯ ಮಾಡಿ, ವೇದಾಧ್ಯಯನ ಸಂಪನ್ನನಾಗಿ ತೀರ್ಥಯಾತ್ರೆಗಳಿಂದ ಶ್ರೇಷ್ಠನೆನಿಸಿದ ಪುಂಡರೀಕನೂ, ಆಚಾರ್ಯರಾದ ನಾರದ ಮುನಿಗಳನ್ನು ಆಶ್ರಯಿಸಿ ಮುಕ್ತಿ ಪಡೆದರು. ಆದುದರಿಂದ ಆಚಾರ್ಯನೇ ಮುಕ್ತಿಗೆ ಕಾರಣನು. ಇಂತಹ ಪರಮಪುರುಷಾರ್ಥ ಸಿದ್ಧಿಗೆ ಪ್ರಧಾನ ಕಾರಣನಾದ ಗುರುವಿನಲ್ಲಿ (ಆಚಾರ್ಯರಲ್ಲಿ) ಕೃತಜ್ಞತಾಭಾವ ಇರಬೇಕು. ಇಂತಹ ಆಚಾರ್ಯ ಸಂಬಂಧಕ್ಕೆ ಪರಮಾತ್ಮನೇ ಪ್ರಧಾನಕಾರಣನಾದುದರಿಂದ ಅವನಲ್ಲಿಯೂ ಕೃತಜ್ಞತೆ ಇರಬೇಕು.

ಪ್ರಪನ್ನನು ಮಾಡುವ ಉತ್ತರಕೃತ್ಯಗಳಲ್ಲಿ ಕೆಲವು ತ್ಯಾಜ್ಯಗಳೆಂದು ಶಾಸ್ತ್ರವು ತಿಳಿಸುತ್ತದೆ. ಅವುಗಳಲ್ಲಿ ಬಹು ಮುಖ್ಯವಾದುದು ವಿಷಯಾಭಿಲಾಷೆ. ವಿಷವು ಸೇವಿಸಿದವನನ್ನು ಮಾತ್ರ ಕೊಲ್ಲುವುದು. ವಿಷಯವು ಸ್ಮರಿಸಿದ ಮಾತ್ರದಿಂದಲೇ ಕೊಲ್ಲುವುದು. ಆದುದರಿಂದ ವಿಷಯಭೋಗವನ್ನು ಮನಸ್ಸಿನಿಂದ ಕೂಡ ಸ್ಮರಿಸಕೂಡದು. ಭಾಗವತರನ್ನ ಯಾವಾಗಲೂ ಅವಮಾನಪಡಿಸಬಾರದು. ಹಾಗೆ ಮಾಡಿದವನು ರೌರವಾದಿ ನರಕಕ್ಕೆ ಹೋಗುವನೆಂದು ಭಗವದ್ವಾಕ್ಯವೇ ಇದೆ. ಭಾಗವತಾಪಚಾರವು ಭಗವನ್ನಿಗ್ರಹಕ್ಕೆ ಕಾರಣವಾಗುವುದು. ಇದನ್ನು ಅಂಬರೀಷ ಉಪಾಖ್ಯಾನದಿಂದ ತಿಳಿಯಬಹುದು.

ಪತಿಯೇ ಪರದೇವತೆ ಎಂದು ತಿಳಿದ ಪತಿವ್ರತಾ ಶಿರೋಮಣಿಯು ತಾನು ತನ್ನ ಪ್ರಿಯತಮನಿಗೆ ತುಂಬ ಪ್ರಿಯಳಾಗಿಯೂ ಭೋಗ್ಯತಮಳಾಗಿಯೂ ಇರಬೇಕೆಂಬ ಉದ್ದೇಶದಿಂದ, ಸರ್ವಾಲಂಕಾರಭೂಷಿತೆಯಾಗಿ, ತಾನು ತನ್ನ ಪ್ರಿಯನಿಗೆ ಅನುರೂಪಳಹುದೋ, ಅಲ್ಲವೋ ಎಂದು ಊಹಿಸಿ ಕನ್ನಡಿಯಲ್ಲಿ ತನ್ನನ್ನು ತಾನು ನೋಡಿಕೊಳ್ಳುತ್ತಿರುವಾಗ, ತಾನು ಧ್ಯಾನಿಸುತ್ತಿದ್ದ ಪತಿಯು ಹಿಂದೆ ಬಂದು ನಿಂತುದುದನ್ನು ಕನ್ನಡಿಯಲ್ಲಿ ಕಂಡು, ಪತ್ನಿಯು ಪತಿಗೆ ಪುಷ್ಪಹಾರ ಹಾಕಿ ಉಪಚರಿಸಿ, ಸರಸ ಸಲ್ಲಾಪಗಳಿಂದ ಹೇಗೆ ಭೋಗ್ಯತಮಳಾಗುವಳೋ, ಹಾಗೆಯೇ ಪ್ರಪನ್ನನೂ, ಮಕಾರವಾಚ್ಯನಾದ ತನ್ನ ಸ್ವರೂಪವನ್ನು ತನ್ನ ಹಿಂದೆಯೇ ಇರುವ ಅಕಾರ ವಾಚ್ಯನಾದ ಶ್ರಿಯಃಪತಿಯ ದಿವ್ಯ ಸ್ವರೂಪವನ್ನು ಮೂಲಮಂತ್ರದ ಪ್ರಣವದಲ್ಲಿ ವಿಶದವಾಗಿ ಕಂಡು ತನಗೂ ಪರಮಾತ್ಮನಿಗೂ ಪತಿಪತ್ನೀ ಸಂಬಂಧವೆಂಬುದನ್ನೂ ತಾನು ಸ್ವಾಮಿಗೆ ಅನನ್ಯಾರ್ಹ ಶೇಷನು, ಅನನ್ಯ ಭೋಗ್ಯನು ಎಂದು ತಿಳಿದು, ಅದಕ್ಕಾಗಿ ಅವನಿಗೆ ನಿತ್ಯ ಕೈಂಕರ್ಯ ಅನುಷ್ಠಾನಾದಿಗಳಿಂದ ಸೇವೆ ಮಾಡುತ್ತಾ, ಆರಾಧನ, ಅರ್ಚನಾದಿಗಳನ್ನು ಭಗವತ್ಪ್ರೀತಿಗಾಗಿ ನಡೆಸುತ್ತ, ತದೀಯರಾದ ಭಾಗವತೋತ್ತಮರಿಗೂ ನಾನಾವಿಧ ಕೈಂಕರ್ಯ ಮಾಡುತ್ತ, ಪರಮಭೋಗ್ಯಭೂತನಾಗಿರುವುದೇ ಉತ್ತರಕೃತ್ಯ ಎಂದು ಆಚಾರ್ಯ ವೇದಾಂತದೇಶಿಕರು ಉಪದೇಶಮಾಡಿದ್ದಾರೆ.

## ಶಾಸ್ತ್ರೀಯ ನಿಯಮನ

ಪ್ರಪತ್ತಿಮಾಡಿದ ತಕ್ಷಣ ಪ್ರಪನ್ನನು, "ಪ್ರಾರಬ್ಧೇತರ ಪೂರ್ವ ಪಾಪ ಮಖಿಲಂ ಪ್ರಾಮಾದಿಕಂಚೋತ್ತರಂ ನ್ಯಾಸೇನ ಕ್ಷಪಯನ್" ಎಂಬಂತೆ ಪ್ರಾರಬ್ಧವಲ್ಲದ ಪೂರ್ವದಲ್ಲಿ ಮಾಡಿದ ಪುಣ್ಯ ಪಾಪಗಳನ್ನು ನಾಶಮಾಡಿ ಕೊಳ್ಳುವನು. ಬುದ್ಧಿಪೂರ್ವವಲ್ಲದ ಉತ್ತರಾಘವೂ ಅಂಟುವುದಿಲ್ಲ. ಹೀಗೆಂದು ಛಾಂದೋಗ್ಯದಲ್ಲಿ ಹೇಳಿದೆ. ಆದರೆ ಮುಕ್ತನ ಹಾಗೆ ಪ್ರಪನ್ನನು ಸ್ವಾಮಿಯ ಹೃದಯವನ್ನು ತಿಳಿಯಲಾರನು. ಏಕೆಂದರೆ ಇವನು ಇನ್ನೂ ಬದ್ಧದೆಶೆಯಲ್ಲಿರುವವನು. ಪರಮಾತ್ಮನ ಅಭಿಮತವನ್ನು ಇನ್ನೂ ತಿಳಿಯ ದವನು. ಆದರೆ ಶಾಸ್ತ್ರಮೂಲಕ ತಿಳಿಯಬಲ್ಲನು. ಇವನಿಗೆ ಶಾಸ್ತ್ರವೇ ಪ್ರಮಾಣ. ಶಾಸ್ತ್ರನಿಯಮವನ್ನು ಅನುಸರಿಸಿ ನಿತ್ಯನೈಮಿತ್ತಿಕಾದಿ ಕರ್ಮ ಗಳನ್ನು ಮೋಕ್ಷಪರ್ಯಂತ ಮಾಡಲೇಬೇಕು. ಈ ಲೀಲಾವಿಭೂತಿಯಲ್ಲಿರು ವವರಿಗೆ ವರ್ಣಾಶ್ರಮ ಧರ್ಮಗಳಿಗನುಗುಣವಾಗಿ ಆಚಾರವನ್ನು ಅನುಸರಿಸ ಬೇಕು. ಶ್ರುತಿ ಸ್ಮೃತಿಗಳು ಪರಮಾತ್ಮನ ಆಜ್ಞೆಗಳು. ಅವನ್ನು ಮೀರಿ ದರೆ ಪರಮಾತ್ಮನಿಗೆ ದ್ರೋಹಮಾಡಿದಂತೆ. ಶಾಸ್ತ್ರಮರ್ಯಾದೆ ಮೀರಿದರೆ, ಅಂತಹವನಿಗೆ ಅನೇಕ ಅನರ್ಥಗಳುಂಟಾಗುವುವು. ಆದುದರಿಂದ ಪ್ರಪನ್ನನು ಶಾಸ್ತ್ರೀಯ ನಿಯಮವನ್ನು ಅನುಸರಿಸಲೇ ಬೇಕು. ಅಂತಹ ನಿಯಮ ಗಳು ಯಾವುವೆಂದರೆ–ಪಂಚ ಮಹಾ ಯಜ್ಞ, ಇಂದ್ರಿಯ ನಿಗ್ರಹ, ಆಹಾರ ನಿಯಮ—ಇತ್ಯಾದಿ.

ಪ್ರಪನ್ನನ ಸರ್ವಧರ್ಮಗಳೂ ಸ್ವಾಮಿ ಕೈಂಕರ್ಯವಾದುದರಿಂದ, ಅವನ್ನು ಶಾಸ್ತ್ರ ನಿಯಮದ ಪ್ರಕಾರ ನಡೆಸಬೇಕು. ಶಾಸ್ತ್ರವು ಕೈದೀಪದಂತೆ. ಕೈ ದೀಪವು ಹೋಗುವ ಕಡೆಯಲ್ಲಿ ಬೆಳಕು ತೋರಿಸುವಂತೆ, ಶಾಸ್ತ್ರವು ಅಜ್ಞಾನ ವನ್ನು ಹೋಗಲಾಡಿಸಿ, ವಿವೇಕವನ್ನುಂಟುಮಾಡುವುದು. ಆದುದರಿಂದ ಪ್ರಪನ್ನನು ಮಾಡುವ ಕಾಯಿಕ, ವಾಚಿಕ, ಮಾನಸಿಕ ಕೈಂಕರ್ಯಗಳೆಲ್ಲಾ ಶಾಸ್ತ್ರಕ್ಕನುಗುಣವಾಗಿರಬೇಕು. "ಶಮಯಸಿ ತಮಃ ಪ್ರಜಾನಾಂ ಶಾಸ್ತ್ರ ಮಯೇನ ಸ್ಥಿರಪ್ರದೀಪೇನ" ಎಂದು ಹೇಳಿರುವಂತೆ ಶಾಸ್ತ್ರವು ಸ್ಥಿರವಾದ ಪ್ರಕಾಶವುಳ್ಳ ದೀಪದಂತಿದೆ.

ದೇಹಯಾತ್ರೆಗಾಗಿ, ದೇಹವಿರುವ ತನಕವಾದರೂ ಪ್ರಪನ್ನನು ಚಿಂತಿಸಬೇಡವೇ ? ಎಂದರೆ ದೇಹಪೋಷಣೆ ಕರ್ಮಾಧೀನ. ಇದು ಅವನ ಪ್ರಾರಬ್ಧ ಕರ್ಮಕ್ಕನುಗುಣವಾಗಿರುವುದರಿಂದ, ಈ ವಿಷಯವನ್ನು ಅವನು ಯೋಚಿಸಬೇಕಾಗಿಲ್ಲ. ಇವನ ಕರ್ಮಕ್ಕನುಗುಣವಾಗಿ ದೇಹಯಾತ್ರೆ ಹೇಗೆ ನಡೆಯಬೇಕೆಂಬುದನ್ನು ಪರಮಾತ್ಮನೇ ನಿಶ್ಚಯಮಾಡಿದ್ದಾನೆ. ಅದರ ವಿಷಯವಾಗಿ ಇವನು ಚಿಂತಿಸಬೇಕಾದುದಿಲ್ಲ. ಹಾಗೆ ಚಿಂತಿಸಿದರೆ ಅವನು ನಾಸ್ತಿಕನಾಗುವನು. "ದೈವಂ ಚೈವಾತ್ರ ಪಂಚಮಂ" ಎಂಬಂತೆ ಈಶ್ವರನೇ ಎಲ್ಲಕ್ಕೂ ಪ್ರಧಾನ ಕಾರಣನು.

ಆದರೆ ಪ್ರಪನ್ನನು ಮಾಡತಕ್ಕದು ಏನೂ ಇಲ್ಲವೇ ? ಎಂದರೆ ಇದೆ. ಒಂದು, ಉಪಾಯಾನುಷ್ಠಾನ. ಇನ್ನೊಂದು ಭಗವದ್ಭಾಗವತ ಕೈಂಕರ್ಯ. ಇವನ ತ್ರಿಕರಣಗಳೂ ಕೈಂಕರ್ಯದಲ್ಲಿ ನಿರತವಾಗಬೇಕು. ಲೋಕದ ಜನರನ್ನು ಅನುಕೂಲರು, ಪ್ರತಿಕೂಲರು ಅನುಭಯರು ಎಂದು ವಿಭಾಗಿಸಿ ಅವರ ವಿಷಯದಲ್ಲಿ ಪ್ರಪನ್ನನು ಹೇಗೆ ನಡೆದುಕೊಳ್ಳಬೇಕೆಂಬುದನ್ನು ತಿಳಿಸಲಾಗಿದೆ.

ಶ್ರೀಮನ್ನಾರಾಯಣನೇ ಪರತತ್ವ ಎಂದು ಯಾರು ತಿಳಿದಿರುವರೋ ಅವರು ಅನುಕೂಲರು. ಇವರ ವಿಷಯದಲ್ಲಿ ಪ್ರಪನ್ನನು ತುಂಬ ಪ್ರೀತಿಯುಳ್ಳವನಾಗಿ, ಗಂಧ, ಪುಷ್ಪ, ಬೆಳದಿಂಗಳು, ಮಲಯಮಾರುತ, ಇಷ್ಟ ಬಂಧು ಮಿತ್ರರಂತೆ ವಿಶ್ವಾಸವುಳ್ಳವನಾಗಿರಬೇಕು. ಪ್ರತಿಕೂಲರು, ಪರಮಾತ್ಮನನ್ನು ಬಿಟ್ಟು ಕ್ಷುದ್ರದೇವತೆಯನ್ನು ಉಪಾಸಿಸುವವರು. ಶಾಸ್ತ್ರವಿಹಿತ ನಿಯಮಗಳಿಗೆ ವಿರೋಧವಾಗಿ ನಡೆಯತಕ್ಕವರು. ಭಗವನ್ನಿಗ್ರಹಕ್ಕೆ ಪಾತ್ರರಾದವರು. ಇವರನ್ನು ಕಂಡರೆ ಪ್ರಪನ್ನನು ಸರ್ಪಾಗ್ನಿಯನ್ನು ಕಂಡಂತೆ ಭಯಪಟ್ಟು ಹತ್ತಿರ ಸೇರಬಾರದು. ಒಂದು ಪಕ್ಷ ಅಗ್ನಿ ಮಧ್ಯೆ ಇದ್ದರೂ ಇರಬಹುದು. ಪರಮಾತ್ಮ ದ್ವೇಷಿಗಳ ಮಧ್ಯೆ ಇರುವುದು ಬಹಳ ಹಾನಿಕರ. ಭಕ್ತರೂ, ಭಗವದ್ದ್ವೇಷಿಗಳೂ ಅಲ್ಲದ ಸಂಸಾರಿಗಳು ಅನುಭಯರು. ಇಂತಹವರನ್ನು ಕಂಡರೆ ಪ್ರಪನ್ನನು, ಕಟ್ಟಿಗೆ, ಮಣ್ಣು, ಹೆಂಟೆ—ಇತ್ಯಾದಿಗಳನ್ನು ಕಂಡಂತೆ ತೃಣ ಸಮಾನವಾಗಿ, ಉದಾಸೀನನಾಗಿರಬೇಕು.

ಒಬ್ಬನು ರಾಜನಿಗೆ ಪ್ರಿಯನಾಗಿದ್ದಾನೆ. ಜನೋಪಕಾರಕ್ಕಾಗಿ ರಾಜನು ನಿರ್ಮಾಣ ಮಾಡಿದ ಜಲಾಶಯವನ್ನು ಇವನು ಹಾಳುಮಾಡಿದರೆ ರಾಜನ ಕೋಪಕ್ಕೆ ಇವನು ಪಾತ್ರನಾಗಿ ಶಿಕ್ಷೆಯನ್ನು ಅನುಭವಿಸುವನು. ಹಾಗೆಯೇ ಪ್ರಪನ್ನನು ಶರಣಾಗತಿಮಾಡಿ ಸ್ವಾಮಿಗೆ ಪ್ರಿಯನಾಗಿದ್ದಾನೆ. ಅವನ ಆಜ್ಞೆಯಾದ ಶಾಸ್ತ್ರವನ್ನು ಉಲ್ಲಂಘಿಸಿದರೆ, ಭಗವಂತನ ಅಪ್ರೀತಿಗೂ ಅದರ ಅನರ್ಥಕ್ಕೂ ಭಾಗಿಯಾಗುವನು. ಆದುದರಿಂದ ಪ್ರಪನ್ನನು ಶಾಸ್ತ್ರನಿಯಮವನ್ನು ಉಲ್ಲಂಘಿಸುವುದು ಯುಕ್ತವಲ್ಲ. ಒಂದು ಪಕ್ಷ ಅತಿಕ್ರಮಿಸಿದರೆ ಪ್ರಾಯಶ್ಚಿತ್ತ ಪ್ರಪತ್ತಿ ಮಾಡಿದರೆ ಆ ಅಪ್ರೀತಿ ಶಮನ ವಾಗುವುದು. ಇಂತಹ ಅಪ್ರೀತಿಗೆ ಪಾತ್ರನಾಗುವುದು ಪ್ರಪನ್ನನ ಸ್ವರೂಪಕ್ಕೆ ಸರಿಯಲ್ಲ.

ಸ್ವಾಮಿಯ ಅಭಿಮತದಂತೆ ಪ್ರಪನ್ನನು ಕೈಂಕರ್ಯ ರೂಪದಲ್ಲಿ ಎಲ್ಲ ಕಾರ್ಯವನ್ನು ನಡೆಸಬೇಕು, ಎಂದಮೇಲೆ ಅವನ ಅಭಿಮತ ತಿಳಿಯುವುದು ಹೇಗೆ? ಎಂದರೆ "ಶ್ರುತಿ ಸ್ಮೃತ್ಯಾಚಾರೈಃ ಸ್ವಮತಿಗತಿಭಿಃ ಶುದ್ಧಮನಸಾಂ। ಸುಸಂಕಲ್ಪೈರ್ಧರ್ಮ್ಯೈಃ ಕುಲಚರಣ ದೇಶಾದಿ ಸಮಯೈಃ ಯೋಗ್ಯಾನಾಂ ನಿಯೋಗೈಃ ನಿಮಿತ್ತ ಸ್ವಪ್ನಾದ್ಯೈರಪಿ—ಎಂದು ಆರು ವಿಧಗಳಿಂದ ತಿಳಿಯ ಬಹುದು. ಶ್ರುತಿಗಳಿಂದಲಾಗಲಿ, ಸ್ಮೃತಿಗಳಿಂದಾಗಲಿ ತಿಳಿಯಬಹುದು. ಪರಿಶುದ್ಧ ಮನಸ್ಕರಾದ ಋಷಿಗಳ ಧರ್ಮ್ಯಯುಕ್ತವಾದ ಸಂಕಲ್ಪಗಳಿಂದ ಭಗವಂತನ ಅಭಿಮತವನ್ನು ತಿಳಿಯಬಹುದು. ಹಾಗೆಯೇ ಕುಲಕ್ಕೆ ಅನುಗುಣವಾದ ಸಂಕೇತಗಳು, ಯೋಗ್ಯರಾದವರ ಅಪ್ಪಣೆ, ಶಕುನ, ಸ್ವಪ್ನ —ಇತ್ಯಾದಿಗಳೂ ಕೂಡ ಭಗವದಭಿಮತ ದ್ಯೋತಕಗಳು. ಇವನ್ನು ತಿಳಿದು ಪ್ರಪನ್ನನು ಕೈಂಕರ್ಯ ಮಾಡಬೇಕು.

## ಅಪರಾಧ ಪರಿಹಾರ

ಮನೆಯಲ್ಲಿ ಹಾವಿನೊಡನೆ ವಾಸವಾಗಿದ್ದರೆ, ಎಷ್ಟೇ ಜಾಗರೂಕ ರಾಗಿದ್ದರೂ, ಹಾವು ಮನೆಯವನನ್ನು ಕಚ್ಚಿ ನಾಶಮಾಡಬಹುದು. ಅದ ರಂತೆ ಮುದಿಸಿದ ಇಂದ್ರಿಯಗಳಿಂದ ಕೂಡಿದ ಮನಸ್ಸು ಚಿತ್ತವಿಭ್ರಮ ವನ್ನುಂಟುಮಾಡಿ ಬುದ್ಧಿಪೂರ್ವಕ ಪಾಪ ಬರುವಂತೆ ಮಾಡಬಹುದು. ಆತ್ಮ

ನನ್ನು ಪಾಪ ಮಾಡುವ ಹಾಗೆ ಪ್ರೇರೇಪಿಸಬಹುದು. ಆದರೆ ಪರಮ ಅನುಗ್ರಹಮಯಿಯಾದ ಲಕ್ಷ್ಮಿಯೊಡನಿರುವ ಪರಮಾತ್ಮನು ಪ್ರಪನ್ನನನ್ನು ಹೇಗಾದರೂ ರಕ್ಷಿಸಬೇಕೆಂದಿರುವುದರಿಂದ ಇಂತಹ ಬುದ್ಧಿಪೂರ್ವಕ ವಿಪರೀತ ಅಪರಾಧಗಳು ವಿದ್ಯುತ್ ಪ್ರಕಾಶದ ಹಾಗೆ ಕ್ಷಣಿಕವಾಗಿರುವುದರಿಂದ, ಇದಕ್ಕಾಗಿ ಪ್ರಪನ್ನನು ಅನುತಾಪಪಟ್ಟು ಪ್ರಾಯಶ್ಚಿತ್ತ ಶರಣಾಗತಿ ಮಾಡಿದರೆ ಪಾಪವಿಮುಕ್ತನಾಗಿ ರಕ್ಷಿಸಲ್ಪಡುವನು.

ಅಪರಾಧವು ಬುದ್ಧಿಪೂರ್ವಕವಾಗಿರಲಿ, ಅಬುದ್ಧಿಪೂರ್ವಕವಾಗಿರಲಿ, ಪ್ರಾಯಶ್ಚಿತ್ತ ಪ್ರಪತ್ತಿಯಿಂದ ಪರಿಹಾರವಾಗುವುದು. ಇದನ್ನು ಶ್ರೀಮದ್ರಾಮಾಯಣ ವಾಕ್ಯದಿಂದ ಉದಹರಿಸಲಾಗಿದೆ. "ಬದುಕಿರಬೇಕೆಂಬ ಇಚ್ಛೆಯು ನಿನಗಿದ್ದರೆ, ಶ್ರೀರಾಮನಲ್ಲಿ ಶರಣಾಗತನಾಗಿ ತನ್ನನ್ನು ಶ್ರೀರಾಮನಿಗೆ ಅರ್ಪಿಸಿ, ಅವನೊಡನೆ ಸ್ನೇಹದಿಂದ ಇರು" ಎಂದು ಸೀತೆಯು ರಾವಣನಿಗೆ ತಿಳಿಸುವಳು. ಇಲ್ಲಿ ರಕ್ಷಣಾರೂಪ ಶರಣಾಗತಿಯೂ, ಪ್ರಾಯಶ್ಚಿತ್ತ ಶರಣಾಗತಿಯೂ ಎರಡೂ ಅಗತ್ಯ ಎಂದಾಯಿತು.

ವಿಧಿತ ಸ್ಸಹಿ ಧರ್ಮಜ್ಞಃ ಶರಣಾಗತವತ್ಸಲಃ ।
ತೇನ ಮೈತ್ರೀ ಭವತು ತೇ ಯದಿ ಜೀವಿತು ಮಿಚ್ಛಸಿ ॥

ಎಂಬಲ್ಲಿ ಮಾತೃವಾತ್ಸಲ್ಯದಿಂದ ಸೀತೆಯು ಆಚಾರ್ಯಸ್ಥಾನದಲ್ಲಿದ್ದು ಜೀವಾತ್ಮಗೆ ತಿಳಿಸುವ ಹಿತೋಪದೇಶವಾಗಿದೆ.

ಒಂದು ಪಕ್ಷ ಪ್ರಾಯಶ್ಚಿತ್ತ ಪ್ರಪತ್ತಿ ಮಾಡದೆ ಹೋದರೂ, ಪರಮಾತ್ಮನು ಕ್ಷಮಾ, ದಯಾ, ವಾತ್ಸಲ್ಯ ಪೂರಿತನಾಗಿರುವುದರಿಂದ, ಪ್ರಪನ್ನನ ಗುರುತರ ಅಪರಾಧಗಳಿಗೆ ಹೆಚ್ಚು ಶಿಕ್ಷೆ ಕೊಡದೆ, ಅಲ್ಪ ದಂಡನೆಯಿಂದ ಆಶ್ರಿತರನ್ನು ರಕ್ಷಿಸುವನು. ಚಕ್ರವರ್ತಿಯು ತನ್ನ ಅಂತಃಪುರದ ಪರಿಜನರಾದ, ಗೂನುಗಳು, ಕುಳ್ಳರು, ಪುತ್ರರು, ಸೇವಕರು ಮಾಡಿದ ಅಪರಾಧಕ್ಕೆ ಅನುಗುಣವಾದ ಶಿಕ್ಷೆ ವಿಧಿಸದೆ ಅಲ್ಪ ದಂಡನೆಯಿಂದ ಹೇಗೆ ಕ್ಷಮಿಸುವನೋ ಹಾಗೆ ಪರಮಾತ್ಮನು ಕಾಕಾಸುರನನ್ನು ರಕ್ಷಿಸಿದಂತೆ ರಕ್ಷಿಸುವನು.

"ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿ" ಎಂಬುದು ಸಾಮಾನ್ಯ ವಚನ. "ಪ್ರಾಯಶ್ಚಿತ್ತಿರಿಯಂ ಸಾತ್ರ ಯತ್ಪುನಶ್ಶರಣಂ ವ್ರಜೇತ್"

ಎಂಬುದು ವಿಶೇಷ ವಚನ. ಸಾಮಾನ್ಯ ವಚನದಿಂದ ಉತ್ತರಾಘ ಸೇರಲಿಲ್ಲವೆಂದೂ, ವಿಶೇಷ ರೀತಿಯ ವಚನದಿಂದ ವಿಶೇಷ ರೀತಿಯ ಪಾಪಕ್ಕೆ ಪ್ರಾಯಶ್ಚಿತ್ತ ಪ್ರಪತ್ತಿ ಆಗತ್ಯವೆಂದೂ ತಿಳಿಸಲಾಯಿತು.

ಕೃತೇ ಪಾಪೇನು ತಾಪೋ ವೈ ಯಸ್ಯ ಪುಂಸಃ ಪ್ರಜಾಯತೇ।
ಪ್ರಾಯಶ್ಚಿತ್ತಂತು ತಸ್ಯೈನಂ ಹರಿಸಂಸ್ಮರಣಂ ಪರಂ ॥

ಪಾಪ ಮಾಡಿದುದಕ್ಕೆ ಯಾರಿಗೆ ಪಶ್ಚಾತ್ತಾಪವುಂಟಾಗುವುದೋ, ಅಂತಹವನಿಗೆ ಹರಿಸ್ಮರಣವೇ ಪ್ರಾಯಶ್ಚಿತ್ತ. ಸಾಮಾನ್ಯವಾಗಿ ಪಾಪ ಮಾಡಿದನಂತರ ಅನುತಾಪ ಉಂಟಾದರೇನೇ ಪ್ರಾಯಶ್ಚಿತ್ತಕ್ಕೆ ಅಧಿಕಾರ. ಇಂತಹ ಅಧಿಕಾರ ಇದ್ದರಲ್ಲವೇ ಪ್ರಾಯಶ್ಚಿತ್ತಕ್ಕೆ ಅವಕಾಶ.

ಪ್ರಾರಬ್ಧ ಕರ್ಮನಾಶಕ್ಕೆ ಪ್ರಪತ್ತಿ ಮಾಡಬೇಕು ಎಂದಾಯಿತು. ಅನಂತರ ಯಾವ ಅಪರಾಧವೂ ಬಾರದ ಹಾಗೆ ಮಾಡಿಕೊಳ್ಳಲು ಸಾಧ್ಯವಿಲ್ಲವೋ ? ಎಂದರೆ ಇದೆ. ಚೇತನನು ತನ್ನ ಅವಿವೇಕವನ್ನು ಸ್ವಾಮಿಯು ಕೊಟ್ಟ ವಿವೇಕದಿಂದ ಭೇದಿಸುವುದು. ಸಕಲ ವಿಧವಾದ ಅಪರಾಧಗಳಿಗೂ ಅವಿವೇಕವೇ ಕಾರಣ. ಅವಿವೇಕ ಎಂದರೆ ದೇಹಾತ್ಮ ಭ್ರಾಂತಿ, ಸ್ವತಂತ್ರಾತ್ಮ ಭ್ರಾಂತಿ. ಜೀವನು ತಾನು ಪರಮಾತ್ಮನಿಗೆ ಶೇಷಭೂತನು, ಅನನ್ಯ ಶರಣನು, ಅನನ್ಯಗತಿಕನು—ಎಂಬ ವಿವೇಕದಿಂದ ಅವಿವೇಕವನ್ನು ತೊಲಗಿಸಬೇಕು.

ಸೌವೀರ ರಾಜನು ತನ್ನ ಮೇನಾವನ್ನು ಹೊರುತ್ತಿದ್ದ ಜಡಭರತ ಮುನಿಯ ವಿಚಾರ ತಿಳಿದಾಗ, ತನಗುಂಟಾದ ಭಾಗವತ ಅಪಚಾರಕ್ಕೆ ಭಯಪಟ್ಟು "ಇಂದ್ರನ ವಜ್ರಾಯುಧಕ್ಕಾಗಲಿ, ರುದ್ರನ ತ್ರಿಶೂಲಕ್ಕಾಗಲಿ, ಯಮನ ದಂಡಕ್ಕಾಗಲಿ, ಅಗ್ನಿ, ಸೂರ್ಯ, ಚಂದ್ರ, ವಾಯು, ಕುಬೇರರ ಅಸ್ತ್ರಕ್ಕಾಗಲಿ ನಾನು ಅಂಜುವವನಲ್ಲ. ಭಾಗವತಾಪಚಾರಕ್ಕೆ ಮಾತ್ರ ನಡುಗಿ ಹೋಗುವೆನು" ಎಂದನು. ಇಂತಹ ಅಪರಾಧ ಉಂಟಾದರೆ ಆ ಭಾಗವತ ಕ್ಷಮಾಪಣೆಯೇ ಅತ್ಯಗತ್ಯ. ಇದನ್ನು ಶ್ರೀಮದ್ರಾಮಾಯಣದ ಶ್ಲೋಕದಿಂದ ಉದಹರಿಸಬಹುದು.

ಕೃತಾಪರಾಧಸ್ಯ ಹಿ ತೇ ನಾನ್ಯತ್ಪಶ್ಯಾಮ್ಯಹಂ ಕ್ಷಮಂ ।
ಅಂತರೇಣಾಂಜಲಿಂ ಬಧ್ವಾ ಲಕ್ಷ್ಮಣಸ್ಯ ಪ್ರಸಾದನಾತ್ ॥

ಲಕ್ಷ್ಮಣನು ಸುಗ್ರೀವನಲ್ಲಿ ಅಪಚಾರಪಡುತ್ತಾನೆ. ಲಕ್ಷ್ಮಣನ ವಿಚಾರದಲ್ಲಿ ಸುಗ್ರೀವನು ಅಪಚಾರಪಡುತ್ತಾನೆ. ಇಬ್ಬರೂ ಪ್ರಪನ್ನರು ಹೀಗೆ ಇಬ್ಬರಿಗೂ ಪರಸ್ಪರ ಉಂಟಾದ ಭಾಗವತಾಪಚಾರವನ್ನು ತಮ್ಮ ತಮ್ಮ ಕ್ಷಮಾಪಣೆಯಿಂದ ಪರಿಹರಿಸಿಕೊಳ್ಳುತ್ತಾರೆ.

ಮೇಲೆ ವಿವರಿಸಿದ ವಿಷಯಗಳೆಲ್ಲವನ್ನೂ ಸ್ವಾಮಿ ವೇದಾಂತ ದೇಶಿಕರು ಒಂದು ಶ್ಲೋಕದಲ್ಲಿ ಹೀಗೆ ಸಂಗ್ರಹಿಸಿದ್ದಾರೆ.

ಪ್ರಾರಬ್ಧೇತರ ಪೂರ್ವಪಾಪಮಖಿಲಂ ಪ್ರಾಮಾದಿಕಂ ಚೋತ್ತರಂ
ನ್ಯಾಸೇನ ಕ್ಷಪಯನ್ನನಭ್ಯುಪಗತಪ್ರಾರಬ್ಧಖಂಡಂ ಚ ನಃ ।
ಧೀಪೂರ್ವೋತ್ತರ, ಪಾಪ್ಮನಾಮಜನನಾಜ್ಞಾತೇಽಪಿ ತನ್ನಿಷ್ಕೃತೇಃ
ಕೌಟಿಲ್ಯೇ ಸತಿ ಶಿಕ್ಷಯಾಪ್ಯನಘಯನ್ ಕ್ರೋಡೀಕರೋತಿ ಪ್ರಭುಃ॥

## ಪ್ರಪನ್ನನ ಸ್ಥಾನವಿಶೇಷ

ಯತ್ರ ನಾರಾಯಣೋ ದೇವಃ ಪರಮಾತ್ಮಾ ಸನಾತನಃ
ತತ್ಪುಣ್ಯಂ ತತ್ಪರಂ ಬ್ರಹ್ಮ ತತ್ತೀರ್ಥಂ ತತ್ತಪೋವನಂ ।
ತತ್ರ ದೇವರ್ಷಯಸ್ಸಿದ್ಧಾಸ್ಸರ್ವೇ ಚೈವ ತಪೋಧನಾಃ ॥

ಅರ್ಚಾವತಾರಿ ಶ್ರೀಮನ್ನಾರಾಯಣನು ಎಲ್ಲಿರುವನೋ, ಅದೇ ದಿವ್ಯಕ್ಷೇತ್ರ, ಅದೇ ಪುಣ್ಯತೀರ್ಥ. ಅದೇ ದಿವ್ಯ ತಪೋವನ. ಅಲ್ಲಿಯೇ ದೇವರ್ಷಿಗಳೂ ಸಿದ್ಧರೂ, ಮುನಿಗಳೂ ಇರುವರು. ಅಂತಹ ಸ್ಥಳವೇ ಪ್ರಪನ್ನನಿಗೆ ವಾಸಿಸಲು ಯೋಗ್ಯವಾದುದು.

ಪುಣ್ಯಕ್ಷೇತ್ರಗಳಲ್ಲಿ ಪ್ರಧಾನವಾದ ಶ್ರೀರಂಗ, ಕಾಂಚೀಪುರ, ತಿರುಪತಿ—ಮೂರು ಸ್ಥಳಗಳು ಪ್ರಪನ್ನನಿಗೆ ವಾಸಿಸಲು ಯೋಗ್ಯವಾದುವು. ಅಂತಹ ಸ್ಥಳಗಳಲ್ಲಿ ವಾಸಿಸಲು ಸಾಧ್ಯವಿಲ್ಲದಿದ್ದರೆ, ಭಗವಂತನಲ್ಲಿ ಪೂರ್ಣ ನಂಬಿಕೆ ಇಟ್ಟು ಭಾಗವತರು ಇರುವ ಸ್ಥಳವೇ ಪುಣ್ಯತೀರ್ಥವೆಂದು ತಿಳಿದು ಅಲ್ಲಿ ವಾಸಿಸಬಹುದು. ಭಗವದಭಿಮತವಾಗಿ, ಭಾಗವತ ಪ್ರಾಚುರ್ಯ

ವುಳ್ಳ ಸ್ಥಳವು ಪ್ರಪನ್ನನಿಗೆ ವಾಸಿಸಲು ದೊರೆತರೆ ಉತ್ತಮ. ಇವೆರಡೂ ಸೇರಿರುವ ಸ್ಥಳವು ದೊರೆಯದಿದ್ದರೆ, ಕರ್ಮ, ಜ್ಞಾನ, ನಿಷ್ಠೆಯ ಒಬ್ಬ ಭಾಗವತರಿರುವ ಸ್ಥಳ ಸಿಕ್ಕಿದರೂ ಯೋಗ್ಯವಾದುದೆಂದು ತಿಳಿಯಬೇಕು. ಎಲ್ಲ ಧರ್ಮಕ್ಷೇತ್ರ, ಪುಣ್ಯಕ್ಷೇತ್ರ ಅದೇ ಎಂದು ತಿಳಿಯಬೇಕು ಸಮುದ್ರ ಸ್ನಾನ, ಗಂಗಾ ಸ್ನಾನ, ಕಾವೇರೀ ಸ್ನಾನ, ನಾನಾ ಪುಣ್ಯ ನದಿಗಳ ಸ್ನಾನ —ಇವುಗಳಿಂದ ದೊರೆಯುವ ಫಲವು, ಅಂತಹ ಭಾಗವತರಿರುವ ಸ್ಥಳದಲ್ಲಿ ಲಭಿಸುತ್ತದೆ.

ಶ್ರೀಮನ್ನಾರಾಯಣನ ದಿವ್ಯ ಕಥಾಸುಧೆಯನ್ನು ಸೇವಿಸದೆ ಇರುವ ಸ್ಥಳವೂ, ಭಾಗವತರಿಗೆ ರುಚಿಸದೆ ಇರುವ ಸ್ಥಳವೂ, ಅದು ಹಿಂದೆ ಎಷ್ಟೇ ಪ್ರಸಿದ್ಧವಾಗಿದ್ದರೂ, ಈಗ ವಾಸಿಸಲು ಯೋಗ್ಯವಲ್ಲ. ಅಂತಹ ಸ್ಥಳವು ಗಂಗಾ ಸ್ನಾನಕ್ಕೆ ಅನುಕೂಲವಾಗಿದ್ದ ಕಾಶಿಯಾದರೂ, ನಾಮ ಮಾತ್ರದಿಂದ ಈಗ ಪ್ರಸಿದ್ಧವಲ್ಲ. ಶ್ರೀರಾಮನ ಜನ್ಮ ಸ್ಥಳವಾಗಿದ್ದ ಅಯೋಧ್ಯೆಯಾದರೂ, ನಾಮ ಮಾತ್ರದಿಂದ ವಾಸಿಸಲು ಯೋಗ್ಯವಲ್ಲ. ಅಂತಹ ಸ್ಥಳವು ಪ್ರಸಿದ್ಧವಾದ ಅವಂತಿಯಾದರೂ, ಕೇವಲ ಹೆಸರಿನಿಂದ ಪಾಪ ವಿಮುಕ್ತಿಯಾಗದು. ಶ್ರೀ ವರದರಾಜಸ್ವಾಮಿಯ ಕಾಂಚಿನಗರವಾದರೂ, ಕೇವಲ ಹೆಸರಿನಿಂದ ಉತ್ಕೃಷ್ಟತೆ ಬರುವುದಿಲ್ಲ. ಹಾಗೆಯೇ ಮಥುರೆಯು ಶ್ರೀ ಕೃಷ್ಣನ ಜನ್ಮಭೂಮಿಯಾಗಿದ್ದರೂ ಮಾತ್ರಕ್ಕೆ ಉತ್ತಮ ಕ್ಷೇತ್ರವಾಗುವುದಿಲ್ಲ. ಯಾವ ಸ್ಥಳವೇ ಆಗಲಿ ಭಾಗವತಾಭಿಮಾನವುಳ್ಳದ್ದಾಗಿ, ವೇದಘೋಷ, ಪ್ರಬಂಧ ಪಠಣ, ಸೂಕ್ತಿವಾಚನ—ಇತ್ಯಾದಿಗಳಿಂದ ಕೂಡಿರದಿದ್ದರೆ, ಅದು ಪ್ರಪನ್ನನಿಗೆ ಆದರಣೀಯವಲ್ಲ. ಭಾಗವತಾಭಿಮಾನ ಇರುವ ಸ್ಥಳದಲ್ಲಿ ಪ್ರಪನ್ನನು ವಾಸಿಸುತ್ತಿರಬೇಕೆಂಬುದೇ ಮುಖ್ಯ ಸಾರಾಂಶ.

## ಪ್ರಪನ್ನನ ಗತಿಚಿಂತನ

ಪ್ರಪನ್ನನು ತನ್ನ ಸ್ಥೂಲ ಶರೀರವನ್ನು ಬಿಟ್ಟು ಪರಮಪದಕ್ಕೆ ಹೋಗುವ ಮಾರ್ಗವನ್ನು ಅರ್ಚಿರಾದಿ ಮಾರ್ಗ ಎಂದು ಹೇಳಲಾಗಿದೆ. ಇವನ ಸೂಕ್ಷ್ಮ ಶರೀರದಲ್ಲಿ ಈ ಮಾರ್ಗವಾಗಿ ಹೋಗುವಾಗ ಅಗ್ನಿ, ದಿವಸ ಶುಕ್ಲಪಕ್ಷ, ಉತ್ತರಾಯಣ, ಸಂವತ್ಸರ, ವಾಯು, ಸೂರ್ಯ, ಚಂದ್ರ,

ವಿದ್ಯುತ್, ವರುಣ, ಇಂದ್ರ, ಬ್ರಹ್ಮ—ಈ ಹನ್ನೆರಡು ಆತಿವಾಹಕ ಅಭಿಮಾನ ದೇವತೆಗಳು ಸೂಕ್ಷ್ಮ ಶರೀರಿಯಾದ ಜೀವನನ್ನು ಸ್ವಾಗತಿಸಿ, ಸತ್ಕರಿಸಿ, ಅಲಂಕರಿಸಿ, ಉಪಚರಿಸಿ ತಮ್ಮ ತಮ್ಮ ಎಲ್ಲೆಯವರೆಗೂ ಜೊತೆಯಲ್ಲಿ ಕರೆದುಕೊಂಡು ಹೋಗಿ, ಮುಂದಿನ ಅಭಿಮಾನ ದೇವತೆಯ ವಶಕ್ಕೆ ಒಪ್ಪಿಸುವರು. ಕೊನೆಯ ವೈದ್ಯುತ್ ಎಂಬ ಅಮಾನವನು. ಇವನನ್ನು ಪರಮಾತ್ಮನ ಬಳಿಗೆ ಕರೆದುಕೊಂಡು ಹೋಗುವನು.

ಪ್ರಪತ್ತಿ ವಿದ್ಯೆಯಿಂದ ಪರಿಣತನಾದ ಪ್ರಪನ್ನನು ಅರ್ಚಿರಾದಿ ಮಾರ್ಗವಾಗಿ ಸೂಕ್ಷ್ಮ ಶರೀರದಲ್ಲಿ ಪರಮಪದವನ್ನು ಕುರಿತು ಹೋಗುವಾಗ, ಪ್ರಕೃತಿಮಂಡಲವನ್ನು ದಾಟಿದಕೂಡಲೇ ವಿರಜಾ ನದಿಯು ದೊರೆಯುವುದು. ಇದರಲ್ಲಿ ಸ್ನಾನಮಾಡಿದ ತಕ್ಷಣ. ಜೀವಾತ್ಮನ ಸೂಕ್ಷ್ಮ ಶರೀರವು ಹೋಗುತ್ತದೆ. ಪರಮಾತ್ಮನ ರೂಪಕ್ಕೆ ಸಮಾನವಾದ ಚತುರ್ಭುಜ, ಶಂಖ ಚಕ್ರಾದಿಗಳನ್ನು ಧರಿಸಿದ ದಿವ್ಯರೂಪವುಂಟಾಗುತ್ತದೆ. ವಿರಜಾ ನದಿಯು, ಲೀಲಾವಿಭೂತಿ, ನಿತ್ಯವಿಭೂತಿಯ ಎಲ್ಲೆಯನ್ನು ನಿರ್ಧರಿಸುವ ಸ್ಥಳದಲ್ಲಿದೆ. ಜೀವಾತ್ಮನಿಗೆ ವಿರಜಾನದಿ ಸ್ನಾನವಾದಕೂಡಲೇ ಅಮಾನವ ಕರ ಸ್ಪರ್ಶವೂ, ದಿವ್ಯಮಂಗಳ ವಿಗ್ರಹವ್ಯಾಪ್ತಿಯೂ ಉಂಟಾಗುವುದು

ವಿರಜಾ ನದಿಯನ್ನು ಬಿಟ್ಟು ಹೋದಮೇಲೆ "ಐರಂಮದೀಯ" ಎಂಬ ಸರಸ್ಸು, ಅದರ ಮುಂದೆ "ಸೋಮಪವನ" ಎಂಬ ಅಶ್ವತ್ಥ ವೃಕ್ಷ, ದಾರಿಯಲ್ಲಿ ಸಿಗುವುದು. ಅಲ್ಲಿಂದ ಮುಂದೆ, ಪರಮಾತ್ಮನ ದಿವ್ಯಮಂಗಳ ವಿಗ್ರಹ ಯುಕ್ತವಾದ, ಪ್ರಕಾಶಮಾನವಾದ ದಿವ್ಯ ಸಭಾ ಮಂಟಪವಿದೆ ಎಂದು ಛಾಂದೋಗ್ಯ ತಿಳಿಸುತ್ತದೆ. ಜೀವಾತ್ಮನು ಹೀಗೆ ಹೋಗುವಾಗ ಅವನಿಗೆ ದೊರೆಯುವ ಸತ್ಕಾರಗಳನ್ನು ಕೌಷೀತಕೀ ಬ್ರಾಹ್ಮಣವು ವಿಸ್ತಾರವಾಗಿ ವಿವರಿಸುತ್ತದೆ. ಜೀವಾತ್ಮನಿಗೆ ದಿವ್ಯ ಮಂಗಳವಿಗ್ರಹ ವ್ಯಾಪ್ತಿ ಆದ ತಕ್ಷಣ, ಅನೇಕ ಮಂದಿ ಅಪ್ಸರಸ್ಸುಗಳು. ಪುಷ್ಪ. ಹಾರ. ಧೂಪ, ಗಂಧ, ಪೀತಾಂಬರಾದಿಗಳಿಂದ ಅವನನ್ನು ಎದುರುಗೊಂಡು ಆಭರಣಗಳಿಂದ ಅಲಂಕರಿಸಿ, ಅವನಿಗೆ ತೇಜಸ್ಸುಂಟಾಗುವಂತೆ ಮಾಡುತ್ತಾರೆ. ಆಗ ಬ್ರಹ್ಮರಸ, ಬ್ರಹ್ಮಗಂಧ, ಬ್ರಹ್ಮತೇಜಸ್ಸು ಜೀವನಲ್ಲಿ ಪ್ರವೇಶಿಸುತ್ತದೆ.

ಪರಮಾತ್ಮನ ದಿವ್ಯ ಮಂಟಪದ ಗೋಪುರ ದ್ವಾರದಲ್ಲಿ ಪ್ರಪನ್ನನಾದ ಜೀವಾತ್ಮನಿಗೆ ದೊರೆಯುವ ಸತ್ಕಾರವನ್ನು ನಮ್ಮಾಳ್ವಾರವರು ಬಹು ಚೆನ್ನಾಗಿ ತಿಳಿಸಿದ್ದಾರೆ. ಹೊಸದಾಗಿ ವೈಕುಂಠಕ್ಕೆ ಬಂದಿರುವ ಮುಕ್ತನನ್ನು ನಿತ್ಯಸೂರಿಗಳು ಪ್ರತ್ಯೇಕವಾಗಿ ಬರಮಾಡಿಕೊಂಡು ಸುಖಾಗಮನ ಬಯಸಿ ಇವನು ಲೀಲಾವಿಭೂತಿಯಲ್ಲಿ ಮಾಡಿದ ಭಗವದ್ಭಾಗವತ ಕೈಂಕರ್ಯವನ್ನು ಕೊಂಡಾಡಿ, ತಮ್ಮ ಪರಿಚಯ ಮಾಡಿಕೊಡುವರು. ಅನಂತರ ಇಂದ್ರ, ಬ್ರಹ್ಮ, ದ್ವಾರಪಾಲಕರಿಗೂ, ಇವನ ಪರಿಚಯ ಮಾಡಿಕೊಡುವರು. ಇಂತಹ ಅವಕಾಶ ಸಿಕ್ಕಿದುದು ಹೊಸದಾಗಿ ಬಂದ ಮುಕ್ತನ ಭಾಗ್ಯವೆಂದು ಕೊಂಡಾಡುವರು. ಅನಂತರ ಈ ಹೊಸ ಮುಕ್ತನ ತಿರುವಡಿಗಳನ್ನು ತೊಳೆದು, ಶ್ರೀ ಚೂರ್ಣ, ಪೂರ್ಣ ಕುಂಭ ದೀಪಾದಿಗಳಮೂಲಕ ಶ್ರೀ ಶಠಾರಿಯನ್ನು ಅರ್ಪಿಸುವರು. ಆಮೇಲೆ ಅವನನ್ನು ದಿವ್ಯ ಸಭಾ ಮಂಟಪಕ್ಕೆ ಕರೆತಂದ ತಕ್ಷಣ, ಸ್ವಾಮಿಯಾದ ಪರಮಾತ್ಮನೇ ಮುಂದೆ ಬಂದು ಇವನನ್ನು ಎದುರುಗೊಂಡು, ಇದುವರಿವಿಗೂ ಮಾರ್ಗ ತಪ್ಪಿ ಹೋಗಿದ್ದು, ಪುನಃ ಸರಿಯಾದ ಮಾರ್ಗ ಹಿಡಿದು ಬಂದನೆಂಬ ಪ್ರೀತ್ಯಾದರದಿಂದ ಪರಮಾನಂದ ಹೊಂದಿ, ಅವನಿಗೆ ಸಕಲ ಉಪಚಾರಗಳು ದೊರೆಯುವಂತೆ ಸಂಕಲ್ಪಿಸುವನು. "ಮಾಮುಪೇತ್ಯ ಪುನರ್ಜನ್ಮ ದುಃಖಾಲಯ ಮಶಾಶ್ವತಂ । ನಾಪ್ನುವಂತಿ ಮಹಾತ್ಮಾನ ಸ್ಸಂಸಿದ್ಧಿಂ ಪರಮಾಂ ಗತಿಂ ॥ ಎಂದು ಅಭಯಪ್ರದಾನಮಾಡುವನು. ದುಃಖಕ್ಕೆ ತೌರುಮನೆಯಾದ, ಅಶಾಶ್ವತವಾದ ಭೂಲೋಕವನ್ನು ಪುನಃ ಅವನು ಎಂದಿಗೂ ಹೊಂದಲಾರನು ಎಂದು ಸ್ವಾಮಿಯೇ ಹೇಳಿದ್ದಾನೆ.

ಇದೇ ವಿಷಯವನ್ನು ಶ್ರೀ ಪರಾಶರಭಟ್ಟರು ಲಕ್ಷ್ಮೀಸ್ತೋತ್ರದಲ್ಲಿ ಬಹು ಚೆನ್ನಾಗಿ ವಿವರಿಸಿದ್ದಾರೆ.

ತೇ ಸಾಧ್ಯಾಸ್ಸಂತಿ ದೇವಾ ಜನನಿಗುಣವಪುರ್ವೇಷವೃತ್ತಸ್ವರೂಪೈ-<br>
ರ್ಭೋಗೈರ್ದಿವ್ಯೈರ್ವಿಶೇಷಾಸ್ಸವಯಸ ಇವ ಯೇ ನಿತ್ಯನಿರ್ದೋಷಗಂಧಾಃ।<br>
ಹೇ! ಶ್ರೀ! ಶ್ರೀರಂಗಭರ್ತು ಸ್ತವಚಪದ ಪರೀಚಾರವೃತ್ತ್ಯೈ ಸದಾಪಿ<br>
ಪ್ರೇಮ ಪ್ರದ್ರಾಣಭಾವಾ ವಿಲಹೃದಯ ಹಠಾತ್ಕಾರ ಕೈಂಕರ್ಯಭೋಗಾಃ ॥

ಹೇ! ತಾಯೀ! ಲಕ್ಷ್ಮೀದೇವಿಯೇ! ಗುಣಾಷ್ಟಕ ಚತುರ್ಭುಜ ಗಳಿಂದ ಕೂಡಿದ ದಿವ್ಯಮಂಗಳ ವಿಗ್ರಹದಿಂದಲೂ, ಜ್ಞಾನಾನಂದಾದಿ ಆತ್ಮ ಸ್ವರೂಪದಿಂದಲೂ, ಭೋಗಗಳಿಂದಲೂ, ಸಮಾನ ವಯಸ್ಕರಾದ ಸ್ನೇಹಿತ ರಂತೆ ಯಾವ ವ್ಯತ್ಯಾಸವೂ ಇಲ್ಲದೆ ಯಾವ ದೋಷವೂ ಇಲ್ಲದೆ, ಇರುವ ನಿತ್ಯಮುಕ್ತರು ಸರ್ವಕಾಲದಲ್ಲಿಯೂ, ಪರಮಾತ್ಮನ ಮತ್ತು ನಿನ್ನ ಕೈಂಕರ್ಯವೇ ತಮ್ಮ ಸುಖವಾದ ಪ್ರವೃತ್ತಿ ಎಂದು ತಿಳಿದಿರುವರು. ಹೀಗೆ ನಿತ್ಯಮುಕ್ತರಲ್ಲಿ ತಾರತಮ್ಯವಿಲ್ಲದಿರುವಾಗ, ಮುಕ್ತ ಮುಕ್ತರಲ್ಲಿ ತಾರ ತಮ್ಯಕ್ಕೆ ಕಾರಣವೇ ಇಲ್ಲ. ಈ ರೀತಿಯಲ್ಲಿ ಜೀವನು ನಿತ್ಯಮುಕ್ತರೊಡನೆ ಪರಮಾತ್ಮ ಕೈಂಕರ್ಯದಲ್ಲಿ ನಿರತನಾಗಿರುವನು. ಇದೇ ವಿಷಯವನ್ನು ಸ್ತೋತ್ರರತ್ನದಲ್ಲಿಯೂ ವೈಕುಂಠ ಗದ್ಯದಲ್ಲಿಯೂ ವಿವರಿಸಲಾಗಿದೆ.

ಜನನ ಮರಣಾದಿಗಳನ್ನುಂಟುಮಾಡುವ ಮಾರ್ಗಕ್ಕೆ ಪಿತೃಪಥ, ಪಿತೃಯಾನ ಧೂಮಾದಿ ಮಾರ್ಗ ಎಂದು ಹೆಸರು. ಬಾವಿಯಿಂದ ಮೇಲಕ್ಕೆ ಹತ್ತಿ ಇಳಿಯುವಂತೆ, ಸ್ವರ್ಗಕ್ಕೆ ಹೋಗುವುದು, ಪುನಃ ಈ ಲೋಕಕ್ಕೆ ಬರುವುದು, ಹೀಗೆ ಅತಿ ಪ್ರಯಾಸಪಡುತ್ತಿರುವ ಚೇತನನು ಶರಣಾಗತಿ ಮಾಡಿದರೆ, ಆತಿವಾಹಕರಿಂದ ಸತ್ಕಾರಪಡೆದು, ಲೀಲಾವಿಭೂತಿಯನ್ನು ದಾಟಿ, ಶ್ರೀಹರಿ ಎಂಬ ಚಂದನ ವೃಕ್ಷದ ನೆರಳನ್ನು ಸೇರಿ, ಅವನ ಸಾಮ್ಯ ಪಡೆದು ಪರಿಪೂರ್ಣ ಬ್ರಹ್ಮಾನುಭವರೂಪ ಪರಮಾನಂದ ಹೊಂದುವನು.

## ಪರಿಪೂರ್ಣ ಬ್ರಹ್ಮಾನುಭವ

ಭಗವದ್ರಾಮಾನುಜಾಚಾರ್ಯರು, ಶ್ರೀವೈಕುಂಠವನ್ನು ವೈಕುಂಠ ಗದ್ಯ ದಲ್ಲಿ ಚೆನ್ನಾಗಿ ವಿವರಿಸಿದ್ದಾರೆ. ಅಮಾನವನಿಂದ ಕರೆದುತಂದ ಮುಕ್ತಾತ್ಮ ನಿಗೆ ಪರಮಾತ್ಮ ಸಮಾಗಮ ದೊರೆತಮೇಲೆ ಅಲ್ಲಿಯೇ ಶಾಶ್ವತವಾಗಿ ನಿಂತು ಪರಮಾತ್ಮನ ಸೇವೆಯಲ್ಲಿನಿರತನಾಗಿರಬೇಕೆಂಬ ಬುದ್ಧಿ ಹುಟ್ಟುವುದು. ಈ ಭೋಗವೂ, ಆನಂದವೂ, ಪರಮಾತ್ಮನ ಆನಂದಕ್ಕೆ ಸಮ ಎಂದಾಯಿತು "ಭೋಗ ಮಾತ್ರ ಸಾಮ್ಯಲಿಂಗಾಚ್ಚ" ಎಂಬ ಸೂತ್ರವು ಇದನ್ನು ತಿಳಿಸು ತ್ತದೆ. ಮುಕ್ತನ ಸೇವೆಯಿಂದ ದಿವ್ಯ ದಂಪತಿಗಳಿಗೆ ಎಂತಹ ಆನಂದ ವುಂಟಾಗುವುದೋ ಅದಕ್ಕೆ ಸಮಾನವಾದ ಆನಂದವನ್ನು ಮುಕ್ತನೂ ಅನುಭವಿಸುವನು.

ಇಂತಹ ಅನುಭವ ಹೇಗಿದೆ ಎಂದರೆ? ಮಹಾ ಪತಿವ್ರತೆಯಾದ ಸ್ತ್ರೀಯು ತನ್ನ ಪತಿಯನ್ನು ಒಂದು ಕ್ಷಣ ಅಗಲದೆ, ಆತನ ಲಾವಣ್ಯ, ಗುಣ, ವ್ಯಾಪಾರಗಳನ್ನು ಅನುಭವಿಸಿ ಹೇಗೆ ಆನಂದದಿಂದಿರುವಳೋ ಹಾಗೆ, ಮುಕ್ತಾತ್ಮನು ಪರಮಾತ್ಮನ ದಿವ್ಯ ಮಂಗಳವಿಗ್ರಹ, ಗುಣ, ವಿಭೂತಿ, ವ್ಯಾಪಾರ—ಮುಂತಾದುವನ್ನು ಸರ್ವ ಭೋಗ್ಯವಾಗಿ ಅನುಭವಿಸುವನು. "ನಿರಂಜನಃ ಪರಮಂ ಸಾಮ್ಯ ಮುಪೈತಿ" ಎಂದು ಶ್ರುತಿಯು ತಿಳಿಸುತ್ತದೆ.

ತಿರುವಾಯ್‌ಮೊಳಿಯಲ್ಲಿ ನಮ್ಮಾಳ್ವಾರವರು ತಮ್ಮನ್ನು ನಾಯಿಕೆಯನ್ನಾಗಿ ಭಾವಿಸಿಕೊಂಡು ನಾಯಕನಾದ ಪರಮಾತ್ಮನನ್ನು ಕುರಿತು "ಹೇ! ಸ್ವಾಮಿ! ನಿನ್ನ ಸಾನ್ನಿಧ್ಯವಿಲ್ಲದಿದ್ದರೆ, ನೀನು ಒಲಿಯದಿದ್ದರೆ, ಈ ನನ್ನ ಸೊಗಸಾದ ದೇಹ ಕಾಂತಿಯಿಂದ ಏನು ಪ್ರಯೋಜನ? ನನ್ನ ಸ್ತ್ರೀತ್ವದಿಂದ ಏನು ಪ್ರಯೋಜನ? ಮನೋಹರವಾದ ನನ್ನ ಸೌಂದರ್ಯದಿಂದ ಪ್ರಯೋಜನವೇನು? ಹಾಗೆಯೇ ನನ್ನ ಜ್ಞಾನದಿಂದ, ಲಾವಣ್ಯದಿಂದ, ಆಭರಣದಿಂದ, ವಸ್ತ್ರಭೂಷಣಗಳಿಂದ, ತನ್ನ ದೇಹದಿಂದ ಕೊನೆಗೆ ನನ್ನ ಆತ್ಮದಿಂದ ಏನು ಪ್ರಯೋಜನವಾದೀತು?" ಎಂದು ಹೇಳಿ ಪರಿತಪಿಸಿ, ಪರಮಾತ್ಮ ಸಾನ್ನಿಧ್ಯವಿದ್ದರೆ ಮಾತ್ರ, ಅವುಗಳ ಸಾರ್ಥಕ್ಯ ಇಲ್ಲದಿದ್ದರೆ ಅವೆಲ್ಲವೂ ಪ್ರತಿಕೂಲ ಎಂದು ತಿಳಿಸಿದ್ದಾರೆ.

ಶ್ರೀ ಯಾಮುನಮುನಿಗಳು ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ನ ದೇಹಂ ನ ಪ್ರಾಣಾನ್ನ ಚ ಸುಖಮಶೇಷಾಭಿಲಷಿತಂ
ನ ಚಾತ್ಮಾನಂ ನಾನ್ಯತ್ಕಿಮಪಿ ತವ ಶೇಷತ್ವವಿಭವಾತ್ ।
ಬಹಿರ್ಭೂತಂ ನಾಥ ಕ್ಷಣಮಪಿ ಸಹೇ ಯಾತು ಶತಧಾ
ವಿನಾಶಂ ತತ್ಸತ್ಯಂ ಮಧುಮಥನ ವಿಜ್ಞಾಪನಮಿದಂ ॥

ಹೇ! ಸ್ವಾಮಿ! ನನ್ನ ದೇಹವಾಗಲಿ, ಪ್ರಾಣವಾಗಲಿ, ಎಲ್ಲರೂ ಅಪೇಕ್ಷಿಸುವ ಸುಖವಾಗಲಿ, ಹೆಚ್ಚೇನು! ನನ್ನ ಆತ್ಮವಾದರೂ ಸರಿಯೇ—ಇವುಗಳಲ್ಲಿ ಯಾವುದಾದರೂ ನಿನ್ನ ಸೇವೆಗೆ ಒದಗುವ ಭಾಗ್ಯಕ್ಕೆ ಹೊರಗಾದರೆ, ಅದನ್ನು ಒಂದು ಕ್ಷಣವಾದರೂ ನಾನು ಸಹಿಸಲಾರೆ ನಾಥ!

ಅದು ನೂರಾಗಿ ಹಾಳಾಗಿ ಹೋಗಲಿ ಹೇ ! ಮಧುಸೂದನಾ ! ಈ ನನ್ನ ವಿಜ್ಞಾಪನೆಯು ಸತ್ಯ"

ಇಂತಹ ಮುಕ್ತಿರೂಪ ಪರಿಪೂರ್ಣ ಬ್ರಹ್ಮಾನುಭವವು ಮನುಷ್ಯ ಶರೀರ ಮೂಲಕ ಉಂಟಾಗುವುದು. ಇತರ ಪ್ರಾಣಿಗಳಿಗೆ ಇಲ್ಲ ಎಂದು ಹೇಳುವುದಕ್ಕಾಗುವುದಿಲ್ಲ ಪರಮಾತ್ಮನ ಕರುಣೆಯೊಂದು ಉಂಟಾದರೆ, ಯಾವ ಶರೀರದ ಮೂಲಕವೇ ಆಗಲಿ ಮುಕ್ತಿ ಪಡೆಯಬಹುದು. ಗಜೇಂದ್ರ ಜಟಾಯು, ಜಾಂಬವಂತ—ಇತ್ಯಾದಿಗಳು ತಮ್ಮ ತಿರ್ಯಗ್ಜಂತು ಶರೀರ ದಿಂದಲೇ ಮುಕ್ತಿ ಪಡೆಯಲಿಲ್ಲವೇ? ಶೂದ್ರ ದೇಹದ ವಿದುರನಿಗೆ ಮೋಕ್ಷ ಬರಲಿಲ್ಲವೇ ? ಒಂದು ಆಗಸೆ ಮರಕ್ಕೆ ಆಚಾರ್ಯೋತ್ತಮರು ಮುಕ್ತಿ ಉಂಟಾಗುವಂತೆ ಕರುಣಿಸಲಿಲ್ಲವೇ ?

"ತವ ದಾಸ್ಯ ಸುಖೈಕ ಸಂಗಿನಾಂ ಭವನೇಷ್ವಸ್ತ್ವಪಿ ಕೀಟಜನ್ಮ ಮೇ" ಎಂದು ಯಾಮುನೇಯರು ತಿಳಿಸಿದ್ದಾರೆ. ಮಹಾ ಭಾಗವತರ ಮನೆಯಲ್ಲಿ ಕೀಟವಾಗಿ ಹುಟ್ಟಿದರೂ ಅದು ಉತ್ತಾರಕ. ಇದೇ ವಿಷಯ ವನ್ನು ಧರ್ಮವ್ಯಾಧ, ಶಬರಿ, ವಿದುರಾದಿ ವೃತ್ತಾಂತಗಳಿಂದ ತಿಳಿಯ ಬಹುದು.

ಪರಮಾತ್ಮನಿಗೂ, ಮುಕ್ತನಿಗೂ ಇರುವ ಸಾಮ್ಯವನ್ನು ತಿಳಿಸಿ, ಆಮೇಲೆ ಯಾವ ವಿಷಯದಲ್ಲಿ ಭಿನ್ನತೆ ಇದೆ ಎಂಬುದನ್ನು ಆಚಾರ್ಯರು ಸ್ಪಷ್ಟಪಡಿಸಿದ್ದಾರೆ. ಎಲ್ಲ ವಿಷಯಗಳಲ್ಲಿ ಸಾಮ್ಯತೆ ಇದ್ದರೆ, ಐಕ್ಯವು ಸಾಧುವಾಗಬಹುದು. ಆದರೆ ಹಾಗೆ ಹೇಳುವುದಕ್ಕೆ ಅವಕಾಶವಿಲ್ಲ. ಪರಮಾತ್ಮನಿಗೆ ಜಗತ್ಕಾರಣತ್ವ ಲಕ್ಷ್ಮೀಪತಿತ್ವ—ಇತ್ಯಾದಿ ಧರ್ಮಗಳೆಲ್ಲ ಇವೆ. ಮುಕ್ತನಿಗೆ ಇವುಗಳೊಂದೂ ಇಲ್ಲ. ಆಧೇಯತ್ವ, ವಿಧೇಯತ್ವ, ಶೇಷತ್ವ, ಅಣುತ್ವ—ಇತ್ಯಾದಿ ಧರ್ಮಗಳನ್ನು ಜೀವನು ಹೊಂದಿದ್ದಾನೆ. ಮುಕ್ತನಾದನಂತರ ಜೀವನು ಯಾವ ಕಾರಣದಿಂದಲೂ ಪುನರ್ಜನ್ಮ ಹೊಂದುವುದಿಲ್ಲ.

ಒಂದು ಪಕ್ಷ ಇಂತಹ ಪುನರಾವರ್ತಿ ಉಂಟಾಗಬೇಕಾದರೆ ಮುಕ್ತ ನಿಗೆ ಭಗವಂತನಲ್ಲಿ ಅಪ್ರೀತಿ, ಭಗವದಾಜ್ಞೆಯ ಉಲ್ಲಂಘನೆ ಉಂಟಾಗ



ಶ್ರೀ ರಂಗನಾಥಸ್ವಾಮಿ, ಶ್ರೀರಂಗ

ಬೇಕು. ಇವುಗಳುಂಟಾಗುವುದಕ್ಕೆ ಕಾರಣವೇ ಇಲ್ಲ. ಮೋಕ್ಷವೆಂಬುದು ಕೈಂಕರ್ಯರೂಪ ಪರಿಪೂರ್ಣ ಬ್ರಹ್ಮಾನುಭವವಾಗಿರುವಾಗ, ಅಲ್ಲಿ ಇತರ ಯಾವ ಶಂಕೆಗೂ ಕಾರಣವಿಲ್ಲ.

## ಸಿದ್ಧೋಪಾಯನು ಯಾರು

ಪರಮ ಪುರುಷನಾದ ಶ್ರೀಮನ್ನಾರಾಯಣನು ಸಿದ್ಧೋಪಾಯನು ಇವನು ಅನಾದಿ ಸಿದ್ಧನಾಗಿ, ತನ್ನ ಪ್ರಾಪ್ತಿಗೆ ತಾನೇ ಮುಖ್ಯ ಸಾಧನವಾಗಿ ಸಿದ್ಧವಾದ ಉಪಾಯಭೂತನಾಗಿರುವುದರಿಂದ ಸಿದ್ಧೋಪಾಯನೆಂದು ಹೇಳಲ್ಪಟ್ಟನು. ಹೀಗೆ ಅವನು ಸಿದ್ಧೋಪಾಯನಾಗಬೇಕಾದರೆ, ಅವನಿಗೆ ಸರ್ವಜ್ಞತೆ ಇರಬೇಕು. ಸಮಸ್ತವನ್ನೂ ಏಕ ಕಾಲದಲ್ಲಿ ಇತರ ಯಾವ ಸಹಾಯದ ಅಪೇಕ್ಷೆ ಇಲ್ಲದೆ ಪ್ರತ್ಯಕ್ಷವಾಗಿ ಸಾಕ್ಷಾತ್ಕರಿಸುವ ಶಕ್ತಿ ಇರಬೇಕು. ಇದು ಪರಮಾತ್ಮನಿಗೆ ವಿನಹ ಮತ್ತಾರಿಗೂ ಇಲ್ಲ.

ಪ್ರಪನ್ನನನ್ನು ಅನುಗ್ರಹಿಸುವುದಕ್ಕೆ ಇಂತಹ ಸರ್ವಜ್ಞತೆಯ ಜೊತೆಗೆ ಸರ್ವ ಶಕ್ತಿಯೂ ಇದೆ. ಪಾಂಡವರಿಗೂ, ದ್ರೌಪದಿಗೂ, ಗಜೇಂದ್ರನಿಗೂ, ಇಂದ್ರನಿಗೂ, ಸುಗ್ರೀವನಿಗೂ, ವಿಭೀಷಣನಿಗೂ, ವಿಶ್ವಾಮಿತ್ರನಿಗೂ, ದಂಡಕಾರಣ್ಯದ ಋಷಿಗಳಿಗೂ ಬೇಡಿದುದನ್ನು ಕೊಟ್ಟು ಸರ್ವಶಕ್ತಿ ಪ್ರದರ್ಶನ ಮಾಡಲಿಲ್ಲವೇ ? ಕರುಣಾಮಹೋದಧಿಯಾದ ಪರಮಾತ್ಮನು, ಪ್ರಪನ್ನನು ಆಶ್ರಯಿಸಿಯಾನೇ, ಎಂಬ ನಿರೀಕ್ಷಣೆಯಲ್ಲಿದ್ದು ಪ್ರಪತ್ತಿಮಾಡಿದ ತಕ್ಷಣ ಸಿದ್ಧೋಪಾಯನಾಗಿ, ಪ್ರಪನ್ನನು ಪರಮಪದ ಸೇರುವ ಹಾಗೆ ಮಾಡುವನು. ಹೀಗೆ ಅನುಗ್ರಹಿಸುವಾಗ "ಲಕ್ಷ್ಮ್ಯಾ ಸಹ ಹೃಷೀಕೇಶೋ ದೇವ್ಯಾ ಕಾರುಣ್ಯ ರೂಪಯಾ। ರಕ್ಷಕಸ್ಸರ್ವ ಸಿದ್ಧಾಂತೇ ವೇದಾಂತೇಷು ಚ ಗೀಯತೇ" ಎಂಬಂತೆ ಸದಾ ಲಕ್ಷ್ಮಿಯೊಡನಿರುವನು. ಪರಿಮಳವು ಹೂವಿನಲ್ಲಿಯೂ ಜ್ಯೋತಿಸ್ಸು ರತ್ನದಲ್ಲಿಯೂ, ಅಂತರ್ಭೂತವಾಗಿರುವಂತೆ ಲಕ್ಷ್ಮಿಯು ಪರಮಾತ್ಮನಲ್ಲಿ ಅಂತರ್ಭೂತಳಾಗಿದ್ದಾಳೆ ಎಂದು ಶ್ರುತಿಗಳು ತಿಳಿಸುತ್ತವೆ.

ಹೀಗೆ ಸಿದ್ಧೋಪಾಯನಾದ ಪರಮಾತ್ಮನನ್ನು ವಶೀಕರಿಸಿಕೊಳ್ಳಬೇಕಾದರೆ ಚೇತನನು "ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ"

ಎಂಬಂತೆ ಶರಣಾಗತಿ ಮಾಡಬೇಕು. "ತಸ್ಯ ಚ ವಶೀಕರಣಂ ತಚ್ಛರಣಾಗತಿರೇವ" ಎಂದು ಶ್ರೀ ಭಾಷ್ಯಕಾರರು ಸ್ಪಷ್ಟಣೆ ಕೊಡಿಸಿದ್ದಾರೆ. ಇಂತಹ ಶರಣಾಗತಿಯನ್ನು ಸಿದ್ಧೋಪಾಯನಾದ ಪರಮಾತ್ಮನು ಅಂಗೀಕರಿಸುವನೋ? ಇದಕ್ಕೆ ಪ್ರಮಾಣವಿದೆಯೋ? ಎಂದರೆ ಬೇಕಾದಷ್ಟಿದೆ. "ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ! ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ", "ಅಪ್ಯಹಂ ಜೀವಿತಂ ಜಹ್ಯಾಂ ತ್ವಾಂ ವಾ ಸೀತೇ ಸಲಕ್ಷ್ಮಣಾಂ" ಇತ್ಯಾದಿ ವಾಕ್ಯಗಳಿಂದ ತಾನು ಸಿದ್ಧೋಪಾಯನೆಂದು ಪರಮಾತ್ಮನೇ ತಿಳಿಸಿದ್ದಾನೆ.

ಲಕ್ಷ್ಮೀವಿಶಿಷ್ಟನಾದ ನಾರಾಯಣನೇ ಸಿದ್ಧೋಪಾಯನು. ಪರಮಾತ್ಮನಿಂದ ಜಗತ್ತು ಹೇಗೆ ವ್ಯಾಪಿಸಿದೆಯೋ ಹಾಗೆಯೇ ಲಕ್ಷ್ಮಿಯಿಂದಲೂ ವ್ಯಾಪಿಸಲ್ಪಟ್ಟಿದೆ. ಇಂತಹ ಸಿದ್ಧೋಪಾಯವು ಇಬ್ಬರಿಗೂ ಏರ್ಪಟ್ಟಿದೆ ಇವರಲ್ಲಿ ಪ್ರಪತ್ತಿ ಮಾಡಿದವರ ಸಮಸ್ತ ಪುರುಷಾರ್ಥಗಳೂ ಸಿದ್ಧಿಸುವುವು. ಅವನೇ ಅವೆಲ್ಲವನ್ನೂ ಸಾಧಿಸಿಕೊಡುವನು. ಆದರೆ ಜೀವನು ಸಾಧ್ಯೋಪಾಯಗಳಾಗಿರುವ ಭಕ್ತಿ, ಪ್ರಪತ್ತಿಗಳಲ್ಲಿ ಯಾವುದಾದರೊಂದನ್ನು ಆಚರಿಸಲೇಬೇಕು.

ಶಾಸ್ತ್ರ ಪ್ರಮಾಣ, ಮತ್ತು ರಹಸ್ಯಾರ್ಥಗಳನ್ನು ತಿಳಿದು ಉಪದೇಶ ಹೊಂದಿದ ಸಂಪ್ರದಾಯ ನಿರತರು ಶ್ರಿಯಃಪತಿಯೇ ಸಾಧ್ಯೋಪಾಯನೆಂದು ತಿಳಿಸಿದರು. ಆದರೆ ಇದು ಕೆಲವರಿಗೇಕೆ ಹೊಳೆಯುಲಿಲ್ಲ? ಎಂದರೆ ಗುಪ್ತವಾಗಿರುವ ಹಿರಣ್ಯನಿಧಿ, ಆ ನಿಧಿ ಇರುವ ಕ್ಷೇತ್ರದ ಮಹಿಮೆ, ಇವನ್ನು ತಿಳಿಯದವರು, ಆ ನಿಧಿಯ ಮೇಲೆ ಸಂಚರಿಸುತ್ತಿದ್ದರೂ, ಅದನ್ನು ಅವರು ತಿಳಿಯಲಾರರು; ಹೊಂದಲಾರರು. ಹಾಗೆಯೇ ಎಲ್ಲರೂ ಸುಷುಪ್ತಿಯಲ್ಲಿ ದಿನವೂ ಪರಮಾತ್ಮನೊಡನೆ ಸೇರಿದ್ದರೂ, ಅಥವ ಅಂತರಾತ್ಮನಾಗಿದ್ದರೂ ಹಿರಣ್ಯನಿಧಿಯ ಹಾಗೆ ಪರಮಾತ್ಮನೊಡನಿದ್ದರೂ ಅವನು ಸಿದ್ಧೋಪಾಯವೆಂದು ತಿಳಿಯಲಾರರು. ಯಾವ ಜೀವನಿಗೆ ಪರಮಾತ್ಮನನ್ನು ಹೊಂದುವ ಸುಕೃತವಿರುವುದೋ, ಅವನು ಪರಮಾತ್ಮನನ್ನು ಸಿದ್ಧೋಪಾಯನಾಗಿ ವರಿಸಿ ಅವನ ಕೃಪೆಗೆ ಪಾತ್ರನಾಗುವನು.

## ಸಾಧ್ಯೋಪಾಯ

ಸರ್ವಜ್ಞನೂ, ಸರ್ವಶಕ್ತನೂ, ಸರ್ವಲೋಕಶರಣ್ಯನೂ, ಆದ ಶ್ರಿಯಃಪತಿಯೇ ಸಿದ್ಧೋಪಾಯನು ಎಂದು ಶ್ರುತಿ, ಸ್ಮೃತಿ, ಸತ್ತರ್ಕ ಬ್ರಹ್ಮಸೂತ್ರ, ಪುರಾಣ ಪ್ರಮಾಣಗಳು, ಸಂಪ್ರದಾಯ ಮತ್ತು ಪೂರ್ವಾಚಾರ್ಯರ ಉಕ್ತಿಗಳಿಂದ ಸ್ಥಾಪಿಸಿದನಂತರ, ಇಂತಹ ಸಿದ್ಧೋಪಾಯನು ತನ್ನಿಷ್ಟಬಂದಂತೆ ಫಲ ಕೊಡುವುದಿಲ್ಲ. ಸಾಧ್ಯೋಪಾಯದಿಂದ ಅವನು ಆರಾಧಿತನಾಗಿ ಸಂತುಷ್ಟನಾದರೆ ಮಾತ್ರ ಫಲಕೊಡುವನು. ಅಂತಹ ಸಾಧ್ಯೋಪಾಯವೇ ಪ್ರಪತ್ತಿ ಅಥವಾ ಶರಣಾಗತಿ. ಪ್ರಪತ್ತಿಯಿಲ್ಲದೆ ಪ್ರಭುವು ಮೋಕ್ಷ ಕೊಡುವುದಿಲ್ಲ ಎಂಬುದು ಆಚಾರ್ಯ ಪರಂಪರೆಯಿಂದ ಬಂದ ಸಂಪ್ರದಾಯವೆಂದು ಸ್ವಾಮಿ ವೇದಾಂತದೇಶಿಕರು ಅನೇಕ ಪ್ರಮಾಣಗಳಿಂದ ಪ್ರತಿಪಾದಿಸಿದ್ದಾರೆ.

ಪ್ರಪತ್ತಿ ಅಥವಾ ಶರಣಾಗತಿಯು ಒಂದು ವೈದಿಕ ಧರ್ಮದಂತೆ ಇರುವುದಲ್ಲಾ! ಇದರಲ್ಲಿ ಸರ್ವರಿಗೂ ಅಧಿಕಾರ ಹೇಗೆ ಎಂದು ಕೆಲವರು ಹೇಳುವರು. "ಸರ್ವಸ್ಯ ಶರಣಂ ಸುಹೃತ್" ಎಂಬುದು ಶ್ರುತಿ ವಾಕ್ಯ. ತೈತ್ತಿರೀಯ, ಶ್ವೇತಾಶ್ವತರ ಉಪನಿಷತ್ತುಗಳು, ಶರಣಾಗತಿಯಲ್ಲಿ ಸರ್ವರಿಗೂ ಅಧಿಕಾರ ಉಂಟು ಎಂದು ಸ್ಫುಟವಾಗಿ ತಿಳಿಸುತ್ತವೆ.

ನ ಜಾತಿ ಭೇದಂ ನ ಕುಲಂ ನ ಲಿಂಗಂ ನ ಗುಣಕ್ರಿಯಾ।
ನ ದೇಶಕಾಲೌ ನಾವಸ್ಥಾಂ ಯೋಗೋಹ್ಯಯಮಪೇಕ್ಷತೇ॥

ಭರನ್ಯಾಸ ಅಥವಾ ಶರಣಾಗತಿ ರೂಪವಾದ ಯೋಗವು ಜಾತಿಭೇದವನ್ನಾಗಲಿ, ಉತ್ಕೃಷ್ಟ ನಿಕೃಷ್ಟಕುಲ ವ್ಯತ್ಯಾಸವನ್ನಾಗಲಿ, ಸ್ತ್ರೀಪುಂಭೇದವನ್ನಾಗಲಿ, ಗುಣಕ್ರಿಯೆಗಳ ಉತ್ತಮಾಧಮ ಸ್ಥಿತಿಯನ್ನಾಗಲಿ, ದೇಶಕಾಲ ವಿವೇಚನೆಯನ್ನಾಗಲಿ ಅಪೇಕ್ಷಿಸುವುದಿಲ್ಲ. ಆದರೆ ತ್ರೈವರ್ಣಿಕರು ಮಂತ್ರವತ್ತಾಗಿಯೂ, ಉಳಿದವರು ತಾಂತ್ರಿಕವಾಗಿಯೂ ಉಪದೇಶ ಹೊಂದಿ ಆಚರಿಸಬಹುದು. ಆದುದರಿಂದ ಇದನ್ನು ವಿಶ್ವಧರ್ಮ ಎಂದು ಹೇಳುವುದರಲ್ಲಿ ಆಕ್ಷೇಪಣೆಯಿಲ್ಲ. ತನ್ನ ಆಶ್ರಯದಲ್ಲಿ ಸಮಸ್ತರಿಗೂ ಅಧಿಕಾರ ಉಂಟೆಂದು ಶ್ರೀ ಕೃಷ್ಣಪರಮಾತ್ಮನೇ ತಿಳಿಸಿದ್ದಾನೆ.

ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ।
ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂ ಗತಿಂ ॥

ಹೀಗೆ ಸರ್ವರಿಗೂ ಅಧಿಕಾರವಿರುವ ಶರಣಾಗತಿ ವಿದ್ಯೆಯನ್ನು ಅಂಗಾಂಗಿ ಸಮೇತ ಆಚರಿಸಬೇಕು ಆಕಿಂಚನ್ಯ, ಅನನ್ಯ ಗತಿತ್ವ ಎರಡೂ ಅಗತ್ಯವಾಗಿರಬೇಕು, ಎಂದು ಯಾಮುನ ಮುನಿಗಳು ತಿಳಿಸಿದ್ದಾರೆ. ಪರಮಾತ್ಮನು ರಕ್ಷಿಸಿಯೇ ರಕ್ಷಿಸುವನು ಎಂಬ ಮಹಾ ವಿಶ್ವಾಸವಿರಬೇಕು.

ಸಾಧ್ಯೋಪಾಯವು ಮುಕ್ತಿಪ್ರದ ಎಂಬುದಕ್ಕೆ ಅನೇಕ ಪ್ರಮಾಣಗಳಿವೆ. "ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ", "ಮಾಮೇಕಂ ಶರಣಂ ವ್ರಜ" "ಮಾಂ ಪ್ರಪನ್ನೋ ವಿಮುಚ್ಯತೇ", "ತಮೇವಂ ವಿದ್ವಾನಮೃತ ಇಹ ಭವತಿ"ಇತ್ಯಾದಿಗಳು. ಸಾಧ್ಯೋಪಾಯದಿಂದ ವಶೀಕೃತನಾಗಿ ಸುಪ್ರೀತನಾದ ಸಿದ್ಧೋಪಾಯನು ಫಲಪ್ರದನು. "ಮಾಮೇಕಂ ಶರಣಂ ವ್ರಜ" ಎಂಬ ವಿಧಿವಾಕ್ಯದಲ್ಲಿ ಸಾಧ್ಯೋಪಾಯವು ಸೂಚಿತವಾಗಿದೆ. ಇಂತಹ ಸಾಧ್ಯೋಪಾಯವು ಪ್ರಪನ್ನನ ಸರ್ವ ಪಾಪಗಳನ್ನು ಹೋಗಲಾಡಿಸುತ್ತದೆ. ಪ್ರಾರಬ್ಧವಾದ ಪಾಪವನ್ನು ತೊಲಗಿಸುತ್ತದೆ. ಅಬುದ್ಧಿಪೂರ್ವಕ ಪಾಪಬರದಂತೆ ಮಾಡುತ್ತದೆ. ಬುದ್ಧಿಪೂರ್ವಕ ಪಾಪ ಒಂದು ವೇಳೆ ಬಂದರೂ ಪ್ರಾಯಶ್ಚಿತ್ತ ಪ್ರಪತ್ತಿಯಿಂದ ನಾಶವಾಗುವಂತೆ ಮಾಡುತ್ತದೆ. ಆದುದರಿಂದ ಸಾಧ್ಯೋಪಾಯವು ಮಹಾ ಮಹಿಮೆಯುಳ್ಳದ್ದು. ಇಂತಹ ಸಾಧ್ಯೋಪಾಯವಾದ ಶರಣಾಗತಿಯ ಪ್ರಭಾವವು ರಹಸ್ಯತ್ರಯದಲ್ಲಿ ಸ್ಪಷ್ಟವಾಗಿದೆ.

## ರಹಸ್ಯತ್ರಯ

ಮೂಲಮಂತ್ರ, ದ್ವಯ, ಚರಮಶ್ಲೋಕ—ಈ ಮೂರು ವ್ಯಾಪಕ ಮಂತ್ರಗಳು ರಹಸ್ಯತ್ರಯ ಎನ್ನಿಸಿಕೊಂಡಿವೆ. ಮೂಲಮಂತ್ರದ ಅರ್ಥವನ್ನು ತಿಳಿಯುವುದರಿಂದ, ಜೀವನಿಗೆ ಉಂಟಾಗುವ ತಿಳಿವಳಿಕೆ ಯಾವುವೆಂದರೆ—1) ಜೀವಾತ್ಮ, ಪರಮಾತ್ಮ ಸ್ವರೂಪ, ಸ್ವಭಾವ ಮತ್ತು ಸಂಬಂಧ. 2) ಜೀವಾತ್ಮನಿಗೆ ಪ್ರಾಪ್ತವಾಗಿರುವ ಪ್ರತಿಬಂಧಕ ರೂಪದಲ್ಲಿರುವ ಸಮಸ್ತ ಪುಣ್ಯಪಾಪಗಳನ್ನು ಕಳೆದು ಅನಿಷ್ಟ ನಿವೃತ್ತಿ. ಇಷ್ಟ

ಪ್ರಾಪ್ತಿಯಲ್ಲಿ ತ್ವರೆ, ಮತ್ತು ಆಸೆ ಇರಬೇಕೆಂಬ ಜ್ಞಾನ, 3) ಇದಕ್ಕಾಗಿ ಶರಣಾಗತಿಯನ್ನು ಆಚರಿಸಬೇಕೆಂಬ ಅರಿವು. ಇದು ದ್ವಯಮಂತ್ರದ ಉಚ್ಚಾರಣೆಯಿಂದ ಉಂಟಾಗುತ್ತವೆ.

ಮೂಲಮಂತ್ರದ ಪ್ರಣವದಲ್ಲಿ ಅಕಾರ, ಉಕಾರ, ಮಕಾರ ಎಂಬ ಮೂರು ಅಕ್ಷರಗಳಿವೆ ಅಕಾರವು ಎಲ್ಲ ಅಕ್ಷರಗಳ ಆದಿ. ಸರ್ವವಾಚಕ ಗಳಿಗೂ ಇದು ಕಾರಣ. ಅಕಾರವು ಸರ್ವ ವಾಚ್ಯ ಶಬ್ದನಾದ ಪರಬ್ರಹ್ಮ ನನ್ನು ಬೋಧಿಸುವುದು. "ಸರ್ವಾಗಿರ ಸ್ತ್ವಯಿ ಪತಂತಿ ತತೋಽಪಿ ಸರ್ವಃ" ಎಂದು ಸ್ವಾಮಿ ನಿಗಮಾಂತ ಮಹಾ ದೇಶಿಕರ ಉಕ್ತಿಯಂತೆ, ಅಕಾರವು ವಿಷ್ಣುವಾಚಕವಾಗಿರುವುದಲ್ಲದೆ, ಅವನನ್ನು ವಿಶೇಷಿಸಿ ಹೇಳುವ ಸಮಸ್ತ ಗುಣಗಳನ್ನೂ ಸೂಚಿಸುವ ಎಲ್ಲ ಶಬ್ದಗಳನ್ನು ವ್ಯಕ್ತಪಡಿಸುತ್ತದೆ. ಹೀಗೆ ಅಕಾರವು ಔಚಿತ್ಯದಿಂದ ವಿಷ್ಣುವಾಚಕ, ರೂಢಿಯಿಂದ ವಿಷ್ಣುವಾಚಕ, ಯೋಗ ರೀತಿಯಲ್ಲಿ ಭಗವದ್ವಾಚಕ, ವ್ಯಾಕರಣ ವ್ಯುತ್ಪತ್ತಿಯಿಂದ ಕೂಡ ಅಕಾರವು ಪರಮಾತ್ಮನನ್ನೇ ಬೋಧಿಸುವುದು.

ಅಕಾರವು ಲಕ್ಷ್ಮೀಪತಿತ್ವವನ್ನು ಬೋಧಿಸುತ್ತದೆ. ಯಾವಾಗ ಇದು ನಾರಾಯಣನನ್ನು ಸೂಚಿಸಿತೋ, ಆಗ ಸದಾ ಜೊತೆಯಲ್ಲಿರುವ ಲಕ್ಷ್ಮಿಯನ್ನು ಅರ್ಥವಾಗಿ ಬೋಧಿಸುತ್ತದೆ. ಅಕಾರದಿಂದ ಕಂಡುಬರುವ ಅರ್ಥಗಳು ಬಹು ಮುಖ್ಯವಾಗಿ ನಾಲ್ಕು. ಜಗತ್ಕಾರಣತ್ವ, ಸರ್ವರಕ್ಷ ಕತ್ವ, ಸರ್ವಶೇಷಿತ್ವ ಮತ್ತು ಶ್ರಿಯಃಪತಿತ್ವ, ಇವನ್ನು ಪ್ರತಿಪಾದಿಸುವುದಕ್ಕೆ ಅನೇಕ ಪ್ರಮಾಣಗಳಿವೆ. ಅಕಾರವಾದಮೇಲೆ ಉಕಾರವು ಬರುತ್ತದೆ.

ಉಕಾರವು ಲಕ್ಷ್ಮೀವಾಚಕ. ಇದು ಶೇಷತ್ವವನ್ನು ವಿವರಿಸುತ್ತದೆ. ಶೇಷತ್ವ ಎಂದರೆ ತನಗಾಗುವ ಉಪಕಾರವನ್ನು ಸ್ವಲ್ಪವೂ ಭಾವಿಸದೆ ಪರಮಾತ್ಮನ ಪ್ರಯೋಜನಕ್ಕಾಗಿಯೇ ತಾನು ಎಂದು ಭಾವಿಸುವುದು. ಹೀಗೆ 'ಅ','ಉ' ಎಂಬ ಎರಡು ಅಕ್ಷರಗಳಿಂದ ವಿಷ್ಣುವೂ ಲಕ್ಷ್ಮಿಯೂ ಹೇಳಲ್ಪಟ್ಟು, ಈ ಆತ್ಮಾವ ದ ಹವಿಸ್ಸನ್ನು ಇಬ್ಬರಿಗೂ ಅರ್ಪಿಸುವುದು ಸಮಂಜಸವಾಗಿದೆ. 'ಉ' ಎಂದರೆ ಶ್ರುತಿಯಲ್ಲಿ ಅವಧಾರಣಾರ್ಥವು ಕಂಡು ಬರುವುದು. ಅವಧಾರಣವಾದ 'ಏವ' ಎಂಬ ಅರ್ಥವಾದಾಗ, ಇತರರಿಗೆ

ತಾನು ಶೇಷನಲ್ಲ, ಪರಮಾತ್ಮನಿಗೇನೇ ಎಂಬ ನಿರುಪಾಧಿಕ ಶೇಷತ್ವವು ಜೀವನಿಗುಂಟಾಗುವುದು.

'ಮ' ಕಾರವು ಜ್ಞಾತಾವಾದ ಜೀವನನ್ನು ಸೂಚಿಸುತ್ತದೆ. ಜೀವನು ಪರಮಾತ್ಮನಿಗೆ ಶೇಷಭೂತನು. ಅಕಾರವಾಚ್ಯನಾದ ವಿಷ್ಣುವು ಮಕಾರ ವಾಚ್ಯನಾದ ಆತ್ಮ ಹವಿಸ್ಸಮರ್ಪಣಕ್ಕೆ ಉದ್ದೇಶ್ಯನು. ಮಕಾರ ವಾಚ್ಯನು ಜೀವ ಎಂದು ಸ್ಥಾಪಿಸಿದನಂತರ ಜೀವಾತ್ಮನು ಪ್ರಕೃತಿಗಿಂತ ವಿಲಕ್ಷಣನು, ಪರಮಾತ್ಮನಿಗಿಂತ ಬೇರೆಯುವನು ಎಂಬುದು ಸಿದ್ಧವಾಯಿತು. ಇವನು ಜ್ಞಾನರೂಪನಾಗಿ, ಜ್ಞಾನಕ್ಕೆ ಆಶ್ರಯನಾಗಿರುವುದರಿಂದ ಅಚಿತ್ತಿಗಿಂತ ವಿಲಕ್ಷಣನು. ಪರಮಾತ್ಮನ ಪ್ರಧಾನವಾದ ಗುಣಗಳು ಸರ್ವರಕ್ಷಕತ್ವ. ಸರ್ವಕಾರಣತ್ವ, ಸರ್ವಶೇಷಿತ್ವ ಜೀವನಲ್ಲಿ ಇಲ್ಲದುದರಿಂದ, ಇವನು ಪರ ಮಾತ್ಮನಿಗಿಂತ ಬೇರೆಯುವನು. ಮಕಾರವು ಏಕ ವಚನಾಂತವಾಗಿದೆ. ಬಹು ಸಂಖ್ಯಾತರೆಂದು ಹೇಳಿದೆಯಲ್ಲಾ ? ಎಂದರೆ ಇದು ಜಾತ್ಯೇಕ ವಚನ. ಜೀವಾತ್ಮರುಗಳಿಗೆ ಪರಸ್ಪರ ಭೇದವು ಶ್ರುತಿ, ಸ್ಮೃತಿ, ಪುರಾಣ ಗಳಿಂದ ಸ್ಥಾಪಿತವಾಗಿದೆ. 'ಅಹಂ', 'ತ್ವಂ', 'ಮೇ' ಎಂಬ ಪ್ರಯೋಗ ಗಳಿಂದ ಜೀವಾತ್ಮ ಪರಮಾತ್ಮ ಭೇದವೂ, ಜೀವಾತ್ಮರ ಪರಸ್ಪರ ಭೇದವೂ ಜೀವಾತ್ಮರ ಬಹುತ್ವವೂ ಸೂಚಿತವಾಗಿದೆ. ಮಕಾರವು ಜೀವ ವಾಚಕ ವಾದರೂ, ತಾನು ಶೇಷಭೂತನು ಎಂಬ ಅನುಸಂಧಾನವು ಸಿದ್ಧಿಸುತ್ತದೆ ಎಂದು ಸ್ಥಾಪಿಸಲಾಗಿದೆ.

"ಮಮ ನಾಥ ಯದಸ್ತಿ ಯೋಸ್ಮ್ಯಹಂ ಸಕಲಂ ತದ್ಧಿ ತವೈವ ಮಾಧವ" ಎಂದು ಯಾಮುನ ಮುನಿಗಳು ತಿಳಿಸಿದರು. ನನ್ನ ಆತ್ಮವು ನಿನ್ನದೇ ವಿನಹ ನನಗೆ ಸಂಬಂಧಿಸಿದುದಲ್ಲ ನಿನಗೆ ಶೇಷಭೂತನಾಮದು" ಎಂದು, "ಎನದಾವಿಯುಂ ಉನದೆ" ಎಂದು ನಮ್ಮಾಳ್ವಾರವರು ಹಾಡಿದರು.

ಹೀಗೆ ಪ್ರಣವದ ಅರ್ಥವನ್ನು ವಿವರಿಸಿ, ಮುಂದೆ ನಮಶ್ಶಬ್ದಾರ್ಥ ದಿಂದ ಎರಡು ವಿಶೇಷಾಭಿಪ್ರಾಯಗಳು ಉಂಟಾಗುತ್ತವೆ. ಎಂದು ತಿಳಿಸ ಲಾಗಿದೆ. ಒಂದು ತಾನು ಯಾವುದಕ್ಕೂ ಸ್ವಾಮಿಯಲ್ಲ. ಇನ್ನೊಂದು ತಾನು ಸ್ವತಂತ್ರನಲ್ಲ. ಎಲ್ಲಕ್ಕೂ ಪರಮಾತ್ಮನೇ ಸ್ವಾಮಿಯು ತಾನಲ್ಲ.

ಪರಮಾತ್ಮನೇ ಸರ್ವಸ್ವತಂತ್ರನು ತಾನಲ್ಲ ಎಂಬ ಜ್ಞಾನ ನಮಶ್ಶಬ್ದದಿಂದ ಉಂಟಾಗುತ್ತದೆ. ಪ್ರಣವ ನಮಸ್ಸುಗಳ ಸಾರಭೂತವಾದ ಅರ್ಥವನ್ನು ಹೀಗೆ ಸಂಗ್ರಹಿಸಲಾಗಿದೆ.

ಶ್ರೀಮಾನ್ ಸ್ವತಂತ್ರಃ ಸ್ವಾಮೀ ಚ ಸರ್ವತ್ರಾನ್ಯಾನಪೇಕ್ಷಯಾ
ನಿರಪೇಕ್ಷ ಸ್ವತಂತ್ರತ್ವಂ ಸಾಮ್ಯಾಂಚಾನ್ಯಸ್ಯ ನ ಕ್ವಚಿತ್ |
ತಾರಶ್ಚ ನಮಸಶ್ಚೈವಾ ಸಾರೌ ದೇಶಿಕ ದರ್ಶಿತೌ
ಅನನ್ಯಶರಣತ್ವಾದೇರಧಿಕಾರಸ್ಯ ಸಿದ್ಧಯೇ ||

ಲಕ್ಷ್ಮೀವಿಶಿಷ್ಟನಾದ ನಾರಾಯಣನು ನಿರುಪಾಧಿಕ ಸ್ವತಂತ್ರನೂ, ಸ್ವಾಮಿಯೂ ಸರ್ವಶೇಷಿಯೂ ಆಗಿದ್ದಾನೆ. ಚಿದಚಿದ್ವಿಶಿಷ್ಟನಾದ ಈ ಜಗತ್ತನ್ನು ತನಗೆ ಹೇಗೆ ಬೇಕೋ ಹಾಗೆ ಉಪಯೋಗಿಸಿಕೊಳ್ಳಲು ಶಕ್ತನಾಗಿದ್ದಾನೆ.

ನಮಶ್ಶಬ್ದದ ಅರ್ಥವನ್ನು ಅಖಂಡವಾಗಿಯೂ, ಸಖಂಡವಾಗಿಯೂ ವಿವರಿಸುವಾಗ, ಸಖಂಡವಾಗಿ ನಮಃ ಎಂಬುದಾಗಿಯೂ ಅಂದರೆ ಮಃ ನ ಎಂದೂ ಅರ್ಥ ಹೇಳಬಹುದು. ಆಗ ಮಕಾರವು ಜೀವಾತ್ಮ ಪರವೆಂದೂ ಮಃ ಎಂಬ ಷಷ್ಠ್ಯೈಕ ವಚನ ಎಂದು ಭಾವಿಸಿದರೆ ಮಮ ಎಂದಾಗುವುದು. ನಮಃ ಎಂಬುದರಿಂದ ನಮಮ ಎಂದಾಗಿ ನನ್ನದಲ್ಲ ಎಂದರ್ಥವಾಗುವುದು. ಹೀಗೆ ಅರ್ಥಮಾಡುವಾಗ ಓಂ ನಮಃ ಎಂಬ ಎರಡು ಪದಗಳಿಗೆ ಜ್ಞಾನತ್ವ, ಆನಂದತ್ವ, ಅಮಲತ್ವಗಳಿಂದ ಪರಿಶುದ್ಧನಾಗಿ ಸಹಜ ಶೇಷನಾದ ಜೀವನು, ಲಕ್ಷ್ಮೀವಿಶಿಷ್ಟನಾಗಿ, ಜಗತ್ಕಾರಣನೂ, ಜಗದ್ರಕ್ಷಕನೂ, ಸರ್ವ ಶೇಷಿಯೂ ಆಗಿರುವ ಪರಮಾತ್ಮನಿಗೇ ಸಮರ್ಪಣೀಯನೇ ವಿನಹ ನನಗಲ್ಲ ಎಂದು ಅರ್ಥವಾಗುವುದು.

ಪ್ರಣವದ ಅಕಾರದಿಂದಲೇ ಪರಮಪುರುಷನು ಜಗತ್ಕಾರಣನು, ಸರ್ವರಕ್ಷಕನು, ಸರ್ವಶೇಷಿಯು, ಶ್ರಿಯಃಪತಿಯು ಎಂದು ಸ್ಥಾಪಿಸಿ, ಉಕಾರ, ಮಕಾರಗಳಿಂದ ಅಂತಹವನಿಗೆ ಸೇವೆ ಮಾಡುವುದೇ ಜೀವನ ಸ್ವರೂಪವೆಂದು ಅರ್ಥ ಹೇಳಿ ಅನಂತರ ನಮಶ್ಶಬ್ದದಿಂದ ಸಾಧ್ಯೋಪಾಯವಾದ ಭರನ್ಯಾಸವು ಬೋಧಿಸಲ್ಪಟ್ಟಿರುವಾಗ, ನಾರಾಯಣಾಯ ಎಂಬ

ಮೂರನೆಯ ಪದದ ಅಗತ್ಯವೇನು ? ಪುನರುಕ್ತಿಯಲ್ಲವೋ ? ಎಂದರೆ ಇಲ್ಲ. ಅಕಾರಕ್ಕಿಂತ ನಾರಾಯಣಾಯ ಶಬ್ದಕ್ಕೆ ವಿಶೇಷ ಮಹಿಮೆಯೂ, ಅನೇಕ ಅರ್ಥಗಳೂ ಇವೆ.

ಪ್ರಣವವು ಸಂಗ್ರಹ. ನಾರಾಯಣಾಯ ಅದರ ವಿಸ್ತಾರ. ಅಕಾರದ ಅರ್ಥವನ್ನು ನಾರಾಯಣ ಶಬ್ದದಲ್ಲಿಯೂ, ಮಕಾರದ ಅರ್ಥವನ್ನು ನಾರ ಪದದಲ್ಲಿಯೂ, ಉಕಾರಾರ್ಥವನ್ನು ನರಸಂಬಂಧಿನೋ ನಾರಾಃ ಎಂಬ ವ್ಯುತ್ಪತ್ತಿ ಮೂಲಕ ತಿಳಿಯಬಹುದು. ಹಾಗೆಯೇ ನಮಸ್ಸಿನ ಅರ್ಥ ಗಳೆಲ್ಲವನ್ನೂ ನಾರಾಯಣ ಶಬ್ದದ ವಿವರಣದಲ್ಲಿ ಕಾಣಬಹುದು.

ನರಾಣಾಮಯನಂ ಖ್ಯಾತಮಹಮೇಕಃ ಸನಾತನಃ
ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ ||

"ಸಂಕೀರ್ತ್ಯ ನಾರಾಯಣ ಶಬ್ದಮಾತ್ರಂ ವಿಮುಕ್ತ ದುಃಖಾ ಸುಖಿನೋಭವಂತಿ", "ವಿಶ್ವಂ ನಾರಾಯಣಂ ಹರಿಂ". "ನಾರಾಯಣಂ ಮಹಾಜ್ಞೇಯಂ", ನಾರಾಯಣಃ ಪರೋಜ್ಯೋತಿಃ", "ಆತ್ಮಾ ನಾರಾ ಯಣಃ ಪರಃ," "ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಸ್ಥಿತಃ" ಹೀಗೆ ನಾರಾಯಣ ಶಬ್ದವು ಪುನಃ ಪುನಃ ಪರಮಾದರದಿಂದ ಹೇಳಲ್ಪಟ್ಟಿದೆ.

ಮೂಲಮಂತ್ರದಿಂದ ಗ್ರಹಿಸತಕ್ಕ ಮುಖ್ಯವಾದ ಅಂಶಗಳು ಮೂರು. 1) ಶ್ರಿಯಃಪತಿಯೇ ತನಗೆ ಪರಮಶೇಷಿ ಇನ್ಯಾರೂ ಇಲ್ಲ. 2) ಅವನೇ ಸಿದ್ಧೋಪಾಯನಾಗಿ ನಿಂತು. ಆತ್ಮನಿಕ್ಷೇಪರೂಪ ಶರಣಾಗತಿ ಆಚರಿಸುವ ಹಾಗೆ ಮಾಡುವನು. ಇನ್ನು ಯಾರೂ ಉಪಾಯವಾಗಲಾರರು. 3) ತಾನು ಶೇಷನಾದುದರಿಂದ ಅವನಿಗೆ ನಿತ್ಯಕೈಂಕರ್ಯ ಮಾಡುವುದೇ ಜೀವನ ಪರಮ ಪುರುಷಾರ್ಥ. ಅದಕ್ಕಿಂತ ಹೆಚ್ಚಿನದು ಇನ್ನೊಂದಿಲ್ಲ.

ಮೂಲಮಂತ್ರವನ್ನು ಅನುಸಂಧಾನ ಮಾಡುವವರಿಗೆ ಲಭಿಸದೇ ಇರುವ ಪುರುಷಾರ್ಥವೇ ಇಲ್ಲ. ಅವು ಯಾವುವೆಂದರೆ, ಸ್ವಾಮಿಗೆ ಭೋಗ್ಯ ವಾದ ಎಂಟು ಗುಣಗಳು, ಎಂಟು ಪುಷ್ಪಗಳ ರೂಪದಲ್ಲಿರುವ ಅಹಿಂಸಾದಿ ಎಂಟು ಮಹಾ ಗುಣಗಳು, ಎಂಟುವಿಧ, ಭಕ್ತಿಗಳು, ಯಮ ನಿಯಮಾದಿ ಎಂಟು ಐಶ್ವರ್ಯಗಳು, ಅಣಿಮಾದಿ ಎಂಟು ವಿಭೂತಿಗಳು ಮತ್ತು ಮುಕ್ತ

ದೆಶೆಯಲ್ಲಿ ಉಂಟಾಗುವ ಅಪಹತ ಪಾಪ್ಮಾದಿ ಎಂಟು ಅಷ್ಟಕಗಳು ಎಂಟು ರಸಗಳಿಗೂ ಮೇಲಾದ, ಮೋಕ್ಷ ಪ್ರಾಪ್ತಿಗೆ ಹೇತುವಾದ ಶಾಂತಿ- ಇತ್ಯಾದಿಗಳೆಲ್ಲವೂ ಲಭಿಸುತ್ತವೆ.

## ದ್ವಯ ಮಂತ್ರ

ಮೂಲ ಮಂತ್ರದಲ್ಲಿಯೇ, ಸರ್ವಾಭಿಪ್ರಾಯಗಳೂ ತುಂಬಿರುವಾಗ, ಇತರ ಮಂತ್ರಗಳ ಅಪೇಕ್ಷೆ ಎಕೆ? ಎಂದರೆ, ದ್ವಯ ಮಂತ್ರದ ಮಹಿಮೆ ಅಪಾರವಾದುದು. "ಸಕೃದುಚ್ಚಾರಸ್ಸಂಸಾರತಾರಣಂ ಭವತಿ", ಒಂದು ಸಲ ಇದನ್ನು ಗುರುಮುಖೇನ ಉಚ್ಚಾರಮಾಡಿದರೆ ಸಂಸಾರದಿಂದ ವಿಮೋಚನೆಯಾಗುವುದು. "ದ್ವಯೇನ ಶರಣಂ ವ್ರಜೇತ್" ಎಂಬಂತೆ ಇದು ಅನುಷ್ಠಾನ ಮಂತ್ರ. ಇದರ ಮಹಿಮೆಯು ಕಠಶ್ರುತಿ, ಪ್ರಶ್ನ ಸಂಹಿತೆಯಲ್ಲಿ ವಿವರಿಸಲ್ಪಟ್ಟಿದೆ. ಈ ಮಂತ್ರವನ್ನು ಅನುಸಂಧಾನ ಮಾಡಿದವರಿಗೆ ಮೋಕ್ಷ ಸಿದ್ಧಿ ಎಂದು ತಿಳಿಸುವುದಕ್ಕೆ "ಅನಘರ್ಯ ಕ್ರೋಡೀ ಕರೋತಿ ಪ್ರಭುಃ" ಎಂದು ಪ್ರಯೋಗಿಸಲಾಗಿದೆ.

ನ ವೇದಾಂತಾತ್ ಶಾಸ್ತ್ರಂ ನ ಮಧುಮಥನಾತ್ತತ್ತ್ವಮಧಿಕಂ
ನ ತದ್ಭಕ್ತತ್ತೀರ್ಥಂ ನ ತದಭಿಮತಾತ್ಸಾತ್ವಿಕ ಪದಂ |
ನ ಸತ್ವಾದಾರೋಗ್ಯಂ ನ ಬುಧವಚನಾತ್ ಬೋಧಜನಕಂ
ನ ಮುಕ್ತೇಃ ಸೌಖ್ಯಂ ನ ದ್ವಯ ವಚನತಃ ಕ್ಷೇಮಕರಣಂ ||

ವೇದಾಂತಕ್ಕಿಂತ ಪವಿತ್ರವಾದ ಶಾಸ್ತ್ರವಿಲ್ಲ. ನಾರಾಯಣನಿಗಿಂತಲೂ ಶ್ರೇಷ್ಠವಾದ ತತ್ವವಿಲ್ಲ. ಭಾಗವತರುಗಳಿಗಿಂತಲೂ ಪಾವನರಾದವರು ಇನ್ನೊಬ್ಬರಿಲ್ಲ ಭಕ್ತರುಗಳಿಗೆ ಇಷ್ಟವಾದ ದೇಶಕ್ಕಿಂತ ಪರಿಶುದ್ಧವಾದ ವಾಸಸ್ಥಾನ ಮತ್ತೊಂದಿಲ್ಲ. ಸತ್ವಗುಣಕ್ಕಿಂತಲೂ ಹೆಚ್ಚು ಆರೋಗ್ಯ ವನ್ನು ಕೊಡುವುದು ಬೇರೆ ಯಾವುದೂ ಇಲ್ಲ. ತತ್ವಜ್ಞಾನ ಪಡೆಯುವು ದಕ್ಕೆ ಸದಾಚಾರ್ಯರನ್ನು ಆಶ್ರಯಿಸುವುದಕ್ಕಿಂತ ಹೆಚ್ಚಿನ ಬೇರೆ ಸಾಧನವಿಲ್ಲ. ಮೋಕ್ಷಕ್ಕಿಂತ ಉತ್ತಮವಾದ ಇತರ ಯಾವ ಸುಖಾನುಭವವೂ ಇಲ್ಲ. ಹಾಗೆಯೇ ದ್ವಯಮಂತ್ರ ಅನುಸಂಧಾನ ಮಾಡುವುದಕ್ಕಿಂತ ಉತ್ತಮ ಮೋಕ್ಷಸಾಧನ ಮತ್ತೊಂದಿಲ್ಲ.

ದ್ವಯಮಂತ್ರದ ಧ್ಯಾನಶ್ಲೋಕದ ತಾತ್ಪರ್ಯ ಹೀಗಿದೆ. ಕ್ಷೀರಸಮುದ್ರ ಮಧ್ಯದಲ್ಲಿರುವ ರತ್ನಮಂಟಪದ ಸುವರ್ಣಸಿಂಹಾಸನದಲ್ಲಿ ಬಿಜಯಮಾಡಿಸಿ, ವಾಮಭಾಗದ ತೊಡೆಯಲ್ಲಿರುವ ಲಕ್ಷ್ಮಿಯಿಂದ ಆಲಿಂಗಿಸಲ್ಪಟ್ಟವನಾಗಿ, ಪ್ರಸನ್ನವಾದ ಮುಖವುಳ್ಳವನಾಗಿ, ಬಾಹುಗಳಲ್ಲಿ ಧರಿಸಿರುವ ಶಂಖ, ಗಧೆ, ಚಕ್ರಾದಿಗಳಿಂದ ಶೋಭಾಯಮಾನವಾಗಿ ವಿರಾಜಿಸುತ್ತಿರುವ ಲಕ್ಷ್ಮೀಪತಿಯಾದ ನಾರಾಯಣನೇ ! ಜನ್ಮಜರಾಮರಣಗಳ ಬಾಧೆಯಿಂದ ತಪ್ಪಿಸಿಕೊಳ್ಳಲಿಕ್ಕಾಗಿ ನಿನ್ನನ್ನು ಆಶ್ರಯಿಸಿ ಧ್ಯಾನಿಸುತ್ತೇನೆ.

ದ್ವಯಮಂತ್ರದ ಪೂರ್ವಾರ್ಧ ಉಪಾಯಪರ, ಉತ್ತರಾರ್ಧ ಉಪೇಯಪರ. ಆದುದರಿಂದಲೇ ಇದಕ್ಕೆ ದ್ವಯ, ಎರಡು ಭಾಗವುಳ್ಳದ್ದು ಎಂಬ ಹೆಸರು ರೂಢಿಯಲ್ಲಿ ಬಂದಿದೆ. ಇದು ಶರಣಾಗತಿ ಮಂತ್ರವಾಗಿ ಉಪಾದೇಯವಾಗಿರುವುದಕ್ಕೆ ಶಾಸ್ತ್ರಪ್ರಮಾಣ, ಸಂಪ್ರದಾಯಬಲ ಎರಡೂ ಇವೆ. ಕಠಶ್ರುತಿ, ತೈತ್ತಿರೀಯ, ನಾರಾಯಣೀಯ, ಶ್ವೇತಾಶ್ವತರ, ಮಂಡೂಕ ಉಪನಿಷತ್ತುಗಳಲ್ಲಿ ಇದು ಉಪಪಾದಿತವಾಗಿದೆ. ಹಾಗೆಯೇ ಭಗವದ್ಗೀತೆ, ವ್ಯಾಸ ಸ್ಮೃತಿ, ಶೌನಕ ಸ್ಮೃತಿ, ಸನತ್ಕುಮಾರಸಂಹಿತೆ, ಅಹಿರ್ಬುಧ್ನ್ಯಸಂಹಿತೆ, ಲಕ್ಷ್ಮೀತಂತ್ರ, ಸಾತ್ಯಕಿತಂತ್ರ, ವರಾಹ, ಪದ್ಮ, ಭಾಗವತ ಪುರಾಣಗಳಲ್ಲಿ ಇದನ್ನು ಪ್ರತಿಪಾದಿಸಲಾಗಿದೆ.

ಲಕ್ಷ್ಮೀಯುಕ್ತನಾದ ನಾರಾಯಣನ ಪಾದಗಳನ್ನು ನಾನು ಉಪಾಯವಾಗಿ ಆಶ್ರಯಿಸಿರುತ್ತೇನೆ ಎಂಬುದು ದ್ವಯಮಂತ್ರದ ಪೂರ್ವಾರ್ಧದ ಸಂಗ್ರಹವಾದ ಅರ್ಥ. ಇದರಿಂದ ಉಂಡುಬರುವುವೇನೆಂದರೆ, ಶರಣಾಗತಿಯನ್ನು ಪತಿಯ ವಾತ್ಸಲ್ಯವನ್ನು ಹೊಂದಿರುವ ಲಕ್ಷ್ಮಿಯಲ್ಲಿ ಪುರುಷಕಾರ ರೂಪವಾಗಿ ಶರಣಾಗತಿ ಮಾಡಬೇಕು. ಇವಳು ಜಗನ್ಮಾತಾ. ನಮಗೂ ಮಾತೆ ಇಬ್ಬರೂ ಒಟ್ಟಿಗೆ ಇರುವವರು. ಇಬ್ಬರೂ ಸೇರಿಯೇ ಪರತತ್ವ. ಶ್ರೀಮನ್ನಾರಾಯಣನೇ ಪ್ರಾಪಕನೂ ಪ್ರಾಪ್ಯನೂ ಆಗಿದ್ದಾನೆ ಎಂಬುದು ಉತ್ತರಾರ್ಧದ ಸಂಗ್ರಹಾರ್ಥ. ಶರಣಾತಿ ಗದ್ಯವು ದ್ವಯದ ವಿವರಣೆಯಾಗಿದೆ.

ದ್ವಯಮಂತ್ರ ಅತ್ಯಂತ ಮಹಿಮೆಯುಳ್ಳದ್ದು. ಮೋಕ್ಷವನ್ನು ಸಂಪಾದಿಸಿಕೊಡುವ ಮಂತ್ರಗಳಲ್ಲಿ ಬಹು ಮುಖ್ಯವಾದದ್ದು. ಉಪಾಯ

ಉಪೇಯುವನ್ನು ತಿಳಿಸುವ ಎರಡು ಖಂಡಗಳುಳ್ಳದ್ದು. ತತ್ವ, ಹಿತ, ಪುರುಷಾರ್ಥವೆಂಬ ಮೂರನ್ನು ತಿಳಿಸುವುದು. ಪುರುಷಾರ್ಥಗಳಲ್ಲಿ ನಾಲ್ಕನೆಯುದಾದ ಮೋಕ್ಷದ ಅರಿವನ್ನುಂಟುಮಾಡುವುದು. ಅರ್ಥ ಪಂಚಕಗಳ ಅರ್ಥವನ್ನೊಳಗೊಂಡಿರುವುದು. ಐದು ಅಂಗ, ಒಂದು ಅಂಗಿ, ಎಂಬ ಆರು ಅಂಗಗಳಿಂದ ಕೂಡಿರುವುದು. ಏಳು ಸಮುದ್ರಗಳ ಮಹಿಮೆ ಎಷ್ಟು ಮಹತ್ವದ್ದೋ ಅಷ್ಟು ಮಹಿಮೆಯುಳ್ಳ ಅಷ್ಟಾಕ್ಷರಿಯ ವಿವರಣವಿದು. ಪರಮಾತ್ಮನಿಗೆ ವಿಹಾರ ಸ್ಥಾನಗಳಾದ ಶ್ರೀರಂಗ, ತಿರುಪತಿ, ಕಂಚಿ, ತಿರುನಾರಾಯಣಪುರ-ಇತ್ಯಾದಿ ಕ್ಷೇತ್ರಗಳಲ್ಲಿ, ಎಲ್ಲಿಯಾದರೂ ಇದ್ದುಕೊಂಡು ಇದನ್ನು ಆಚರಿಸಿದವರಿಗೆ ಶಾಂತಿ ಕೊಡತಕ್ಕ ಮಹಾ ಮಂತ್ರ ಇದು. ಅನುಕೂಲವಾದಾಗಲೆಲ್ಲ, ಕಾಲ ದೇಶ ವರ್ತಮಾನಗಳ ವ್ಯತ್ಯಾಸವಿಲ್ಲದೆ, ಪಠಣಮಾಡಲು ಯೋಗ್ಯವಾದ ಮಂತ್ರವಿದು.

## ಚರಮಶ್ಲೋಕ

ಭಾರತದ ಕುರುಕ್ಷೇತ್ರ ಯುದ್ಧಕ್ಕೆ ಅರ್ಜುನನನ್ನು ನಾಯಕನನ್ನಾಗಿ ಮಾಡಿ, ಶ್ರೀಕೃಷ್ಣನು ತಾನೇ ಸಾರಥಿಯಾಗಿ ನಿಂತು, ಅವನ ಶತ್ರುಗಳನ್ನು ಸಂಪೂರ್ಣವಾಗಿ ನಾಶಮಾಡಲು ಸಿದ್ಧನಾದನು. ಆ ಸಮಯದಲ್ಲಿ ಇಡೀ ಬಂಧುವರ್ಗವು ತನ್ನಿಂದ ನಾಶವಾಗುವುದಲ್ಲಾ, ತಾನೇ ಇದಕ್ಕೆ ಕಾರಣವಾಗುವೆನಲ್ಲಾ, ಎಂದು ಅರ್ಜುನನು ಶೋಕಿಸಿದನು. ಯುದ್ಧಮಾಡುವುದು ಅಧರ್ಮ ಎಂದು ಅವನು ತಿಳಿದನು. ಹೀಗೆ ಶೋಕದಿಂದ ತೊಳಲುತ್ತಿರುವ ಅರ್ಜುನನು ಶ್ರೀ ಕೃಷ್ಣನಲ್ಲಿ ಶರಣಾಗತನಾಗಿ ಶಿಷ್ಯನಾದ ತನಗೆ ಯಾವುದು ಶ್ರೇಯಸ್ಸು, ಯಾವುದನ್ನು ತಾನು ಮಾಡಬೇಕು ಎಂಬುದನ್ನು ತಿಳಿಸುವಂತೆ ಬೇಡಿದನು.

ಅಂತಹ ದುಃಖ ಸಮಯದಲ್ಲಿ ಅರ್ಜುನನನ್ನು ವ್ಯಾಜವನ್ನಾಗಿಟ್ಟುಕೊಂಡು ಭಗವಾನ್ ಶ್ರೀ ಕೃಷ್ಣನು ಭಗವದ್ಗೀತೆ ಎಂಬ ಅಮೃತವನ್ನು ಜಗತ್ತಿಗೆ ಅನುಗ್ರಹಿಸಿದನು. ಮೊದಲು ಶ್ರೀ ಕೃಷ್ಣನು ಅರ್ಜುನನಿಗೆ ಆತ್ಮಸ್ವರೂಪವನ್ನು ತಿಳಿಸಿ, ಮೋಕ್ಷೋಪಾಯ ಸೂಚಿಸಲು ಪರಂಪರೆಯಾಗಿ ಕಾರಣವಾದ ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗ ಮತ್ತು ಅವುಗಳ

ಅಂಗಗಳನ್ನು ಉಪದೇಶಮಾಡಿ, ಇವುಗಳಲ್ಲಿ ತನಗೆ ಯಾವುದು ಅಪೇಕ್ಷಿತವೋ ಅದನ್ನು ಆರಿಸಿಕೊಳ್ಳುವಂತೆ ಹೇಳಿದನು. ಇದನ್ನು ಕೇಳಿ ಅರ್ಜುನನಿಗೆ ದುಃಖ ಶಮನವಾಗಲಿಲ್ಲ. ತನಗೆ ಸ್ಥಿರವಾದ ಮಾರ್ಗವನ್ನು ಸ್ವಾಮಿಯು ತೋರಿಸಲಿಲ್ಲವಲ್ಲಾ ಎಂಬ ಶೋಕ ಅವನಿಗೆ ಹೋಗಲಿಲ್ಲ. ಇದನ್ನು ಕಂಡು ಶ್ರೀಕೃಷ್ಣನು ಭಕ್ತಿಯೋಗವನ್ನು ಅರ್ಜುನನಿಗೆ ಉಪದೇಶ ಮಾಡಿ, ಈ ರಹಸ್ಯವನ್ನು ಬಹು ಶ್ರದ್ಧೆಯಿಂದ ಆಚರಿಸುವಂತೆ ತಿಳಿಸಿದನು.

ಅಷ್ಟಾಂಗ ಸಹಿತವಾದ ಭಕ್ತಿಯೋಗವನ್ನು ಆಚರಿಸುವುದು ಬಹು ಕಷ್ಟ ಎಂಬುದು ಅರ್ಜುನನಿಗೆ ಗೋಚರವಾಯಿತು. ಇದನ್ನು ಆಚರಿಸುವುದಕ್ಕೆ ಜ್ಞಾನ, ಶಕ್ತಿ ಪರಿಪೂರ್ಣವಾಗಿರಬೇಕು. ಅತಿ ಜಾಗರೂಕತೆ ಇರಬೇಕು. ಅದರಿಂದ ಜಾಗ್ರತೆ ಫಲ ದೊರೆಯುವುದಿಲ್ಲ ಎಂಬುದನ್ನು ಅರ್ಜುನನು ಮನಗಂಡನು. ಅವನ ಶೋಕ ಹೋಗಲಿಲ್ಲ. ಇಂತಹ ಅರ್ಜುನನ ಕಠಿಣ ಪರಿಸ್ಥಿತಿಯನ್ನು, ಶ್ರೀಕೃಷ್ಣಪರಮಾತ್ಮನು ನೋಡಿ, ಪರಮ ರಹಸ್ಯವಾಗಿರುವ ಪ್ರಪತ್ತಿವಿದ್ಯೆಯನ್ನು ಅವನಿಗೆ ತಿಳಿಸುವುದಕ್ಕೆ ಇದೇ ತಕ್ಕ ಸಮಯವೆಂದು ನಿಶ್ಚಯಮಾಡಿ, ಅರ್ಜುನನನ್ನು ವ್ಯಾಜವನ್ನಾಗಿಟ್ಟುಕೊಂಡು ಇಡೀ ಜಗತ್ತಿಗೆ ಚರಮಶ್ಲೋಕದ ಪ್ರಪತ್ತಿ ರಹಸ್ಯವನ್ನು ಪರಮಾತ್ಮನು ಅನುಗ್ರಹಿಸಿದನು. ಇದನ್ನು ಕೇಳಿ ಅರ್ಜುನನ ಶೋಕವು ಪೂರ್ಣವಾಗಿ ನಾಶವಾಯಿತು. ಶ್ರೀಕೃಷ್ಣನ ಅಪ್ಪಣೆಯನ್ನು ಶಿರಸಾವಹಿಸಿ ಉಜ್ಜೀವಿತನಾದ ಅರ್ಜುನನು ತನ್ನ ಸ್ವಧರ್ಮವನ್ನು ಆಚರಿಸಿದನು.

ಇಂತಹ ಪರಮರಹಸ್ಯವಾದ ಶರಣಾಗತಿ ನಿಷ್ಠೆಯನ್ನು ಒಂದು ಅನುಷ್ಟುಪ್ ಶ್ಲೋಕದಿಂದ ತಿಳಿಸಿದರೆ ಸಾಕೇ? ಅದರ ಸ್ವರೂಪ ಎಂತಹದು? ಅದನ್ನು ಆಚರಿಸುವುದು ಹೇಗೆ ? ಅದರ ಅಂಗಗಳು ಯಾವುವು? ಇತ್ಯಾದಿಗಳನ್ನು ವಿಶದವಾಗಿ ತಿಳಿಸಬೇಡವೇ ? ಎಂದರೆ ಅದು ಯುದ್ಧಕಾಲ. ವಿವರಿಸುವುದಕ್ಕೆ ಸಮಯವಿಲ್ಲ. ಅರ್ಜುನನ ಆಶಯ ತನ್ನ ಸರ್ವ ಪಾಪಗಳು ತೊಲಗುವುದಕ್ಕೆ ಬೇಕಾದ ಉಪಾಯ. ಉಪಾಸನವನ್ನು ಆಚರಿಸುವುದಕ್ಕೆ ಅಶಕ್ತನಾದ ತನಗೆ ಅಭಯಪ್ರದಾನವಾಗಬೇಕು. ಯಾವಾಗ ಅರ್ಜುನನ ಶೋಕವನ್ನು ಪರಮಾತ್ಮನು ನಿವಾರಣೆ ಮಾಡಿದನೋ, ಆಗ

ಅವನು ಸಂತುಷ್ಟನಾಗಿ, ತನ್ನ ಮೋಹ ಹೋಯಿತು "ಕರಿಷ್ಯೇ ವಚನಂ ತವ" ಎಂದು ಹೇಳಿ ಗಾಂಡೀವವನ್ನು ಹಿಡಿದು ಯುದ್ಧಕ್ಕೆ ಸಿದ್ಧನಾದನು.

ಚರಮಶ್ಲೋಕದ ಅರ್ಥ ಹೀಗಿದೆ. ಮೋಕ್ಷಪ್ರಾಪ್ತಿಗೆ ಸಾಧನವಾದ ಇದುವರಿವಿಗೂ ತಿಳಿಸಿದ ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗಗಳ ಆಚರಣೆಯಲ್ಲಿ ಯಾವುದು ಕಷ್ಟವಾದರೆ ಅವೆಲ್ಲವನ್ನೂ ಬಿಟ್ಟು, ಅವುಗಳ ಕರ್ತೃತ್ವ, ಮಮತ್ವ ಫಲವನ್ನು ಪೂರ್ಣವಾಗಿ ತ್ಯಾಗಮಾಡಿ, ದೇವತಾಂತರ ಸಂಬಂಧವಿಲ್ಲದ, ಅನುಗ್ರಹಮಯಳಾಗಿ ಸದಾ ನನ್ನ ಸಂಗಡ ಇರುವ ಲಕ್ಷ್ಮೀಯುಕ್ತನಾದ ನನ್ನೊಬ್ಬನನ್ನೇ ಸಿದ್ಧೋಪಾಯನಾಗಿ ಹೊಂದು. ನಾನೇ ಪ್ರಾಪ್ತಿಗೆ ಉಪಾಯನೂ, ಪ್ರಾಪ್ಯನೂ ಎಂದು ಅನುಸಂಧಾನ ಮಾಡು. ಭಕ್ತರ ಅಭೀಷ್ಟವನ್ನು ಸಲ್ಲಿಸಬೇಕೆಂದು ಕಂಕಣಬದ್ಧನಾದ, ಭಕ್ತರಲ್ಲಿ ಅಪರಿಮಿತ ದಯಾವಾತ್ಸಲ್ಯಾದಿಗಳಿಂದ ಪ್ರೇರಿತನಾದ ನಾನು, ನನ್ನಲ್ಲಿ ಶರಣಾಗತಿಮಾಡಿ, ಪ್ರಪನ್ನನಾದ ನಿನ್ನನ್ನು ಅನಾದಿಕಾಲದಿಂದ ಸಂಚಿತವಾದ ಸರ್ವ ಪಾಪಗಳಿಂದ ಬಿಡಿಸುವೆನು. ದುಃಖಿಸಬೇಡ. ಅಳ ಬೇಡ. ಇಲ್ಲಿ ಅರ್ಜುನನ ಶೋಕಕ್ಕೆ ಕಾರಣ ಬಂಧುಗಳನ್ನು ಕೊಲ್ಲಬೇಕು ಎಂಬುದಲ್ಲ. ಅನಾದಿ ಕಾಲದಿಂದ ಸಂಚಿತವಾದ ತನ್ನ ಪಾಪರಾಶಿಯನ್ನು ಹೋಗಲಾಡಿಸಿಕೊಳ್ಳುವುದು ಹೇಗೆ ಎಂಬ ಶೋಕ. ಇದನ್ನು ಹೋಗ ಲಾಡಿಸಿಕೊಳ್ಳಬೇಕಾದರೆ ಪ್ರಪತ್ತಿ ವಿದ್ಯೆಯೇ ಸರಿಯಾದ ಸುಲಭವಾದ ಮಾರ್ಗ.

ಈ ಶ್ಲೋಕದ ಇನ್ನೊಂದು ವಿಧ ಅರ್ಥ ಹೀಗಿದೆ. ನೀನು ಮಾಡಿರುವ ಅನೇಕ ಅಪರಾಧಗಳಿಗೆ ವಿಧಿಸಿರುವ ಸರ್ವ ಪ್ರಾಯಶ್ಚಿತ್ತ ಧರ್ಮಗಳನ್ನು ಬಿಟ್ಟು, ನನ್ನೊಬ್ಬನನ್ನೇ ಉಪಾಯವಾಗಿ ವರಿಸು. ಹೀಗೆ ನನ್ನಲ್ಲಿ ಶರಣಾ ಗತಿಮಾಡಿದರೆ, ಅದರ ಮಹಾತ್ಮ್ಯೆಯಿಂದ ನಿನ್ನನ್ನು ಸರ್ವ ಪಾಪಗಳಿಂದಲೂ ಬಿಡಿಸುವೆನು. ಅಳಬೇಡ, ಹೀಗೆ ನನ್ನಲ್ಲಿ ಮಾಡುವ ಶರಣಾಗತಿಯೇ ಸ್ತ್ರೀಶೂದ್ರಾದಿ ಸಮಸ್ತರಿಗೂ, ಸಮಸ್ತ ಪಾಪಗಳಿಗೂ ಪ್ರಾಯಶ್ಚಿತ್ತ ರೂಪ ವಾದುದು. ಒಂದೊಂದು ಅಪರಾಧಕ್ಕೆ ಒಂದೊಂದು ಪ್ರಾಯಶ್ಚಿತ್ತವನ್ನು ಶಾಸ್ತ್ರವು ವಿಧಿಸಿದೆ. ಆದರೆ ಶರಣಾಗತಿಯು ಸರ್ವ ಪಾಪಗಳಿಗೂ ಒಂದೇ

ಪ್ರಾಯಶ್ಚಿತ್ತರೂಪವಾದುದು ಒಂದೇಸಲ ಮಾಡತಕ್ಕದ್ದು ಎಂದು ಇಲ್ಲಿ ಸೂಚಿತವಾಗಿದೆ.

ಇಲ್ಲಿರುವ ಇನ್ನೊಂದು ವಿಶೇಷಾರ್ಥ ಎಂದರೆ—ಪರಮಪುರುಷನನ್ನು ಆಶ್ರಯಿಸಿ ಶರಣಾಗತಿಮಾಡಿದರೆ, ಸರ್ವ ಪಾಪನಿವಾರಣೆಯಾಗುವುದೆಂದು ತಿಳಿಸಿರುವುದರಿಂದ, ಯಾವ ಯಾವ ಪ್ರಪನ್ನನು ಯಾವ ಯಾವ ಇಷ್ಟ ಸಿದ್ಧಿಗೋಸ್ಕರ ಪರಮಾತ್ಮನನ್ನು ಆಶ್ರಯಿಸಿದರೆ, ಶರಣಾಗತಿ ಮಾಡಿದರೆ, ಅಂತಹ ಸಿದ್ಧಿ ದೊರೆಯುವುದು. ಇಂತಹ ಶರಣಾಗತಿಗೆ, ಪ್ರಪದನ, ಭರನ್ಯಾಸ, ನ್ಯಾಸವಿದ್ಯೆ, ಆತ್ಮನಿಕ್ಷೇಪ, ಅನುಗ್ರಹ, ಸ್ವತಂತ್ರ ಪ್ರಪತ್ತಿ ಎಂಬ ಅನೇಕ ಹೆಸರು ರೂಢಿಯಲ್ಲಿ ಬಂದಿದೆ. ಇದು ಶ್ರುತಿ ಪ್ರತಿಪಾದಿತವಾಗಿ ಶ್ರೀಮದ್ರಾಮಾಯಣ, ಪಾಂಚರಾತ್ರ, ಭಾಗವತ, ಮಹಾಭಾರತ-ಇತ್ಯಾದಿ ಗ್ರಂಥಗಳಲ್ಲಿ ಪ್ರತಿಪಾದಿತವಾಗಿದೆ. ಇದಕ್ಕೆ ಚರಮಶ್ಲೋಕ ಎಂಬ ಹೆಸರು ಬರುವುದಕ್ಕೆ ಮುಖ್ಯವಾಗಿ ಮೂರು ಕಾರಣಗಳಿವೆ. ಇದು ಗೀತೆಯ ಕೊನೆಯ ಶ್ಲೋಕವಾಗಿ ಪ್ರಾಪ್ಯವನ್ನು ಸುಲಭವಾಗಿ ಹೊಂದಿಸುವ ಉತ್ತಮ ಉಪಾಯವನ್ನು ಬೋಧಿಸುವುದು. ಭಕ್ತಿಗೆ ಅಶಕ್ತನಾದವನಿಗೆ ಇದು ಕೊನೆಯ ಉಪಾಯ ಎಂದು ಅಹಿರ್ಬುಧ್ನ್ಯ ಸಂಹಿತೆ ತಿಳಿಸುವುದು.

ಯದ್ಯೇನ ಕಾಮಕಾಮೇನ ನ ಸಾಧ್ಯಂ ಸಾಧನಾಂತರೈಃ ।
ತೇನ ತೇನಾಪ್ಯತೇ ತತ್ತತ್ ನ್ಯಾಸೇನೈವ ಮಹಾಮುನೇ ॥

ಚರಮದೆಶೆಯಲ್ಲಿ ಸುಲಭವಾಗಿ ಸುಕರವಾಗಿ ಸರ್ವೋತ್ಕೃಷ್ಟ ಮಹಿಮೆಯುಳ್ಳ ಉಪಾಯವನ್ನು ಇದು ಬೋಧಿಸುವುದು.

ಶರಣಾಗತಿಯನ್ನು ಆಚರಿಸುವಾಗ, ಆಚಾರ್ಯರು ತತ್ವ, ಹಿತ, ಪುರುಷಾರ್ಥಗಳನ್ನು ತಿಳಿಸುವರು. ಜೀವಾತ್ಮ ಎಂಬುವನೊಬ್ಬನಿದ್ದಾನೆ. ಇವನು ಶರೀರ, ಇಂದ್ರಿಯಗಳಿಗಿಂತ ಬೇರೆಯಾದವನು. ನಾಶವಿಲ್ಲದವನು. ಪ್ರಕೃತಿಗಿಂತ ವಿಲಕ್ಷಣನು. ಚೇತನಾಚೇತನಗಳಿಗೆ ಅಂತರ್ಯಾಮಿಯಾಗಿಯೂ, ಅವುಗಳಿಗೆ ಶೇಷಿಯಾಗಿಯೂ, ಇರುವ ಪರಮಾತ್ಮನಿದ್ದಾನೆ. ಇವನೇ ಜೀವನನ್ನು ರಕ್ಷಿಸಬಲ್ಲನು. ಜೀವನು ತನ್ನನ್ನು ತಾನು ರಕ್ಷಿಸಿಕೊಳ್ಳಲು ಶಕ್ತಿ ಇಲ್ಲದವನು. ಪರಮಾತ್ಮನನ್ನು ಬಿಟ್ಟರೆ, ಇವನನ್ನು ರಕ್ಷಿಸಲು ಇನ್ಯಾರಿಗೂ ಶಕ್ತಿ ಇಲ್ಲ. ಇದೇ ತತ್ವ.

ಅನಾದಿಕಾಲದಿಂದ ಜೀವಾತ್ಮನು ಸಂಸಾರ ಸಮುದ್ರದಲ್ಲಿ ಮುಳುಗಿ ಗರ್ಭವಾಸಾದಿ ಕ್ಲೇಶಗಳಿಂದ ತತ್ತರಿಸುತ್ತಿದ್ದಾನೆ. ಅಂತಹ ಜೀವನಿಗೆ ಆಚಾರ್ಯರು ಗುರು ಪರಂಪರೆಯನ್ನು ತಿಳಿಸಿ, ದ್ವಯ ಮಂತ್ರವನ್ನು ಉಪ ದೇಶಮಾಡಿ, ಅದರ ಅರ್ಥವನ್ನು ತಿಳಿಸಿ, ಗರ್ಭವಾಸಾದಿ ಕಷ್ಟಗಳು ಪುನಃ ಇವನಿಗೆ ಬಾರದಂತೆ, ಪರಮಾತ್ಮನು ತನ್ನ ಚರಣಕಮಲಗಳನ್ನು ಇವನಿಗೆ ಕೊಟ್ಟು ರಕ್ಷಿಸಬೇಕೆಂದು ಪರಮಾತ್ಮನಲ್ಲಿ ಪ್ರಾರ್ಥಿಸಿ, ಚೇತನನನ್ನೂ, ಅವನಿಗೆ ಸೇರಿದ್ದನ್ನು ಅವುಗಳನ್ನು ಅವಲಂಬಿಸಿರುವ ಜವಾಬ್ದಾರಿಯನ್ನೂ ಪರಮಾತ್ಮನ ಚರಣಕಮಲಗಳಲ್ಲಿ ಸಂಪೂರ್ಣ ವಿಶ್ವಾಸದಿಂದ ಅರ್ಪಿಸುವರು. ಇದೇ ಹಿತ.

ಹೀಗೆ ಆಚಾರ್ಯರು ಚೇತನನನ್ನು ಪರಮಾತ್ಮನಲ್ಲಿ ಅರ್ಪಿಸುವುದರಿಂದ ಅವನು ಎಂದಿಗೂ ತನ್ನನ್ನು ಕೈಬಿಡಲಾರ ಎಂಬ ಪೂರ್ಣ ಮನೋದಾರ್ಢ್ಯ ದಿಂದ ಈ ಲೋಕದಲ್ಲಿರುವವರೆಗೆ, ಮೋಕ್ಷಕ್ಕೆ ಪ್ರತಿಬಂಧಕ ಬಾರದೇ ಇರುವ ರೀತಿಯಲ್ಲಿ ಭಗವದ್ಭಾಗವತ ಕೈಂಕರ್ಯಮಾಡುತ್ತ ಕೊನೆಗೆ ಅವನು ಮೋಕ್ಷವನ್ನು ಪಡೆಯುವನು. ಇದೇ ಪುರುಷಾರ್ಥ, ಇಂತಹ ತತ್ವ, ಹಿತ, ಪುರುಷಾರ್ಥಗಳು ಆಚಾರ್ಯರಿಂದ ಚೇತನನಿಗೆ ದತ್ತವಾದ ದಾಯಧನ. ಇಂತಹ ಧನವನ್ನು ಆಚಾರ್ಯರು ನಿರುಪಾಧಿಕ ಕೃಪೆಯಿಂದ ಜೀವನಿಗೆ ಕೊಟ್ಟು, ಉಪಕಾರ ಮಾಡಿದ್ದಾರೆ. ತಮ್ಮ ಆಚಾರ್ಯರಾದ ಕಿಡಾಂಬಿ ಅಪ್ಪುಳ್ಳಾರ್ ಅವರು ಗಿಳಿಯು ಅಭ್ಯಾಸಮಾಡುವಂತೆ ಮಾಡಿ ತಮಗೆ ಬಹು ಕೃಪೆಯಿಂದ ಉಪದೇಶ ಮಾಡಿದರೆಂದು, ಸ್ವಾಮಿ ನಿಗಮಾಂತ ಮಹಾ ದೇಶಿ ಕರು ತಮ್ಮ ಗುರುಗಳ ಉಪಕಾರವನ್ನು ಸ್ಮರಿಸಿದ್ದಾರೆ. ಹೀಗೆ ಉಪದೇಶ ವಾದ ಅರ್ಥಗಳೆಲ್ಲವನ್ನೂ ಶ್ರೀ ಲಕ್ಷ್ಮೀಹಯಗ್ರೀವ ಸ್ವಾಮಿಯು ತಮ್ಮ ಮೂಲಕ ಪ್ರಕಾಶಪಡಿಸಿರುವನು. ಈ ಎಲ್ಲ ರಹಸ್ಯಾರ್ಥಗಳನ್ನೂ ಪರ ಮಾತ್ಮನು ತಮ್ಮ ಮೂಲಕ ರಹಸ್ಯತ್ರಯ ಸಾರವೆಂಬ ಗ್ರಂಥದ ಮೂಲಕ ಪ್ರಕಾಶವಾಗುವಂತೆ ಕರುಣಿಸಿದ್ದಾನೆ ಎಂದು ಶ್ರೀ ವೇದಾಂತ ದೇಶಿಕರು ಗುರುವಂದನ ಸಲ್ಲಿಸಿದ್ದಾರೆ.

ಶ್ರೀಕೃಷ್ಣಪರಮಾತ್ಮನು ಶ್ರೀವೈಷ್ಣವ ಸಂಪ್ರದಾಯ ತಿಳಿದ ಮೂರು ಮಂದಿ ಆಳ್ವಾರರಿಗೆ ವೇದಗಳ ಸಾರವನ್ನು ಕೃಪೆಮಾಡಿ ತಿಳಿಸಿದನು. ಇದ

ರಿಂದ ಅವರ ಅಜ್ಞಾನವು ತೊಲಗಿ ತಿರುಕ್ಕೋವಿಲೂರು ಎಂಬ ಕ್ಷೇತ್ರದಲ್ಲಿ ತಾವು ಪಡೆದ ಜ್ಞಾನವನ್ನು ಅವರು ಪ್ರಕಾಶಪಡಿಸಿದರು. ಒಬ್ಬೊಬ್ಬರೂ ತಾವು ಕಂಡ ಪರಮಾತ್ಮನ ಅನುಭವವನ್ನು ಒಂದೊಂದು ರೀತಿಯಲ್ಲಿ ವರ್ಣಿಸಿದ್ದಾರೆ. ಹಾಗೆಯೇ ಆಚಾರ್ಯರು ಕೂಡ ತಮಗೆ ಸಂಪ್ರದಾಯ ರೀತಿಯಲ್ಲಿ ಉಪದೇಶವಾಗಿ ಬಂದ ತತ್ವ, ಹಿತ, ಪುರುಷಾರ್ಥಗಳನ್ನು ವಿವರಿಸಿ ಜ್ಞಾನ ದೀಪವು ಆರಿ ಹೋಗದ ಹಾಗೆ ಮಾಡಿದ್ದಾರೆ. ಪರಮಪದಕ್ಕೆ ಹೋಗುವ ಆಸೆ ಇಟ್ಟುಕೊಂಡು, ಇಲ್ಲಿ ಅಜ್ಞಾನವಿಲ್ಲದಂತೆ ಇವರು ಮಾಡಲು ಪರಮಾತ್ಮನೇ ಇವರಿಗೆ ಅಂತಹ ಅವಕಾಶವನ್ನು ಕರುಣಿಸಿದನು. ಹೀಗೆ ಆಚಾರ್ಯರು ಹತ್ತಿಸಿದ ದೀಪವು ತತ್ಕಾಲದ ಶಿಷ್ಯರಿಗೇ ಅಲ್ಲದೆ, ಮುಂದಿನ ಪೀಳಿಗೆಯವರಿಗೂ ಪುಸ್ತಕ ರೂಪದಲ್ಲಿಟ್ಟು ಮಹೋಪಕಾರಮಾಡಿದ್ದಾರೆ. ಅಂತಹ ಆಚಾರ್ಯರ ಪರಂಪರೆಯಲ್ಲಿ, ಸ್ವಾಮಿ ನಿಗಮಾಂತ ಮಹಾ ದೇಶಿಕರು ಅಗ್ರಗಣ್ಯರು.

ಆಚಾರ್ಯ ಕಟಾಕ್ಷ ಶಿಷ್ಯನಿಗುಂಟಾದರೆ, ಸಮಸ್ತವೂ ಅವನಿಗೆ ಕರತಲಾಮಲಕವಾಗುವುದು. ಶಿಷ್ಯನ ಅಜ್ಞಾನವು ತೊಲಗುವುದು. ಮೂಲ ಮಂತ್ರ, ದ್ವಯಾದಿಮಂತ್ರಗಳ ಸ್ವರೂಪ ರೂಪಾದಿಗುಣಗಳನ್ನು ಪಡೆದು, ಸಂಪ್ರದಾಯವಾಗಿ ಬಂದ ವಿಶೇಷಾರ್ಥಗಳನ್ನು ತಿಳಿದು ಅನುಸಂಧಾನ ಮಾಡಿದರೆ ಶಿಷ್ಯನು ಮೋಕ್ಷ ಹೊಂದುವನು.

ಆಚಾರ್ಯರು ಸಂದರ್ಭಾನುಸಾರ ಉಪದೇಶಮಾಡುವ ಸಂಗ್ರಹವಾದ ಸನ್ಮಾತುಗಳನ್ನು ಜ್ಞಾಪಕದಲ್ಲಿಟ್ಟುಕೊಂಡು, ಅವುಗಳನ್ನು ಮನನ ಮಾಡುತ್ತಿದ್ದರೆ, ಶಿಷ್ಯನ ಜ್ಞಾನ ವಿಕಾಸವಾಗುವುದು. ಧರ್ಮ ಸೂಕ್ಷ್ಮವನ್ನು ಸರಿಯಾಗಿ ತಿಳಿಯುವುದು ಕಷ್ಟ. ಇಂತಹ ಧರ್ಮ ಸೂಕ್ಷ್ಮಗಳನ್ನು ಋಷಿಗಳು ಕೂಡ ಶ್ರುತಿ, ಸ್ಮೃತಿ, ಆಧಾರಗಳಮೇಲೆ ಶ್ರಮಪಟ್ಟು ತಿಳಿದುಕೊಂಡಿದ್ದಾರೆ. ಈ ಮಾರ್ಗದಲ್ಲಿ ಬಂದ ತಡೆಗಳನ್ನು ಪೂರ್ವಾಚಾರ್ಯರು ಪರಿಹರಿಸಿ, ತಾವೂ ಅದೇ ಮಾರ್ಗವನ್ನು ಅನುಸರಿಸಿ, ಇತರರಿಗೆಲ್ಲ ಮಾರ್ಗ ದರ್ಶಕರಾಗಿದ್ದಾರೆ.

ಪ್ರಪನ್ನನಾದ ಜೀವನು, ದೇಹಾವಸಾನವಾದ ಮೇಲೆ ದಿವ್ಯ ವೈಕುಂಠವನ್ನು ಸೇರಿ, ತಿರುಮಾಮಣಿ ಮಂಟಪದ ದಿವ್ಯ ಪರ್ಯಂಕದಲ್ಲಿ

ಸಮಸ್ತ ದಿವ್ಯಾಭರಣ ಭೂಷಿತನಾಗಿ, ದಿವ್ಯ ಪೀತಾಂಬರಧಾರಿಯಾಗಿ, ವಕ್ಷಸ್ಥಳದಲ್ಲಿ ದಿವ್ಯ ಕೌಸ್ತುಭಮಣಿಯು ಪ್ರಕಾಶಿಸುತ್ತಿರುವಾಗ, ಶ್ರೀ ಸಮೇತನಾಗಿ, ಇತರ ಮಹಿಷಿಯರಾದ, ನೀಳಾ, ಭೂದೇವಿ ಸಮೇತನಾಗಿ ಆದಿಶೇಷಪರ್ಯಂಕದಲ್ಲಿರುವ ಪರಮಾತ್ಮನ ಚರಣಕಮಲಗಳನ್ನು ಸೇರುವನು. ಇದೇ ಮೋಕ್ಷ. ಹೀಗೆ ತಾನು ಇಷ್ಟಪಟ್ಟು ಆಶಿಸಿದಂತೆ, ಎಲ್ಲ ಕಾಲ ಎಲ್ಲ ಅವಸ್ಥೆಯಲ್ಲಿಯೂ ಪರಮಾತ್ಮನಿಗೆ ಸರ್ವವಿಧ ಸೇವೆ ಮಾಡುತ್ತಾ ಇರುವನು. ಇಂತಹ ಮೋಕ್ಷ ಸಾಮ್ರಾಜ್ಯವನ್ನು ಪಡೆಯಲು ಸಮಸ್ತರಿಗೂ ಅಧಿಕಾರವುಂಟು. ಇಂತಹ ಮೋಕ್ಷ ಪಡೆಯುವುದಕ್ಕೆ ಪ್ರಪತ್ತಿ ಅಥವಾ ಶರಣಾಗತಿಯೇ ಸುಲಭವಾದ ಉಪಾಯ. ಇದು ಸಮಸ್ತರಿಗೂ ಅನ್ವಯವಾಗುವುದರಿಂದ ಇದು ವಿಶ್ವಧರ್ಮ ಎಂದು ಹೇಳಬಹುದು. ಇಂತಹ ಮಹಿಮೆಯುಳ್ಳ ವಿಶ್ವಧರ್ಮವನ್ನು ಶ್ರೀ ದೇಶಿಕರು, ರಹಸ್ಯತ್ರಯಸಾರವೆಂಬ ತಮ್ಮ ಅಮೋಘ ಕೃತಿಯಲ್ಲಿ ವಿಸ್ತಾರವಾಗಿ ವಿಶದಪಡಿಸಿದ್ದಾರೆ.

ಶ್ರೀ ಲಕ್ಷ್ಮೀಹಯಗ್ರೀವಸ್ವಾಮಿಯು ಆಚಾರ್ಯರಾಗಿ ತಮ್ಮ ಹೃದಯದಲ್ಲಿ ನಿಂತು, ಪ್ರೇರೇಪಿಸಿ ಆ ವಿಷಯಗಳನ್ನು ತಿಳಿದು ಎಲ್ಲರೂ ಉಜ್ಜೀವಿತರಾಗುವಂತೆ ತಮ್ಮಿಂದ ಈ ಗ್ರಂಥವನ್ನು ಬರೆಸಿದ್ದಾನೆ. ಪರಮಾತ್ಮನೇ ಹೀಗೆ ಅಪ್ಪಣೆ ಕೊಡಿಸಿ ಬರೆಸಿರುವ ಕೃತಿಯಲ್ಲಿ ಯಾವ ದೋಷವೂ ಇಲ್ಲ. ಈ ದಿವ್ಯ ಸೂಕ್ತಿಯ ಮಹಿಮೆಯನ್ನು ಕಂಡು ಯಾರಾದರೂ. ಸ್ವೀಕರಿಸಿದರೂ ಸರಿಯೇ, ಅಥವಾ ದೋಷವಿದೆಯೆಂದು ತಿರಸ್ಕರಿಸಿದರೂ ಸರಿಯೇ ತಾವು ಅಂತಹವರನ್ನು ಎಂದಿಗೂ ದ್ವೇಷಿಸುವುದಿಲ್ಲ. ಏಕೆಂದರೆ ಹೀಗೆ ಸಂತೋಷಪಡುವವನೂ ಅಥವಾ ಅಸಂತುಷ್ಟಿ ಹೊಂದುವವನೂ ಆ ಹಯಗ್ರೀವಸ್ವಾಮಿಯೇ ಆಗಿರುವುದರಿಂದ ಅವನೇ ಆ ಕೃತಿಯ ಮುಖ್ಯ ಕರ್ತೃವಾಗಿರುವನು. ಹೀಗೆಂದು ಆಚಾರ್ಯೋತ್ತಮರಾದ ಶ್ರೀ ವೇದಾಂತ ದೇಶಿಕರು ಗ್ರಂಥಸಮಾಪ್ತಿ ಮಾಡಿದ್ದಾರೆ.

ರಹಸ್ಯತ್ರಯಸಾರೋಽಯಂ ವೇಂಕಟೇಶವಿಪಶ್ಚಿತಾ
ಶರಣ್ಯದಂಪತಿವಿದಾಂ ಸಂಮತಸ್ಸಮುಗೃಹ್ಯತ ॥
ಕವಿತಾರ್ಕಿಕ ಸಿಂಹಾಯ ಕಲ್ಯಾಣಗುಣಶಾಲಿನೇ
ಶ್ರೀಮತೇ ವೇಂಕಟೇಶಾಯ ವೇದಾಂತಗುರವೇ ನಮಃ ॥

---

॥ ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ ॥

# ನ್ಯಾ ಸ ದ ಶ ಕ ಮ್

---

ಕನ್ನಡ ಅನುವಾದ :
ಹೆಚ್. ರಂಗಾಚಾರ್, ಎಂ.ಎ.
(ನಿವೃತ್ತ ರೈಲ್ವೆ ಜನರಲ್ ಮಾನೇಜರ್)

1969
ಶ್ರೀಕಾಂತ ಪವರ್ ಪ್ರೆಸ್,
ಮೈಸೂರು

ಶ್ರೀ ಹಯಗ್ರೀವಾಯ ನಮಃ
ಶ್ರೀಮತೇ ರಾಮಾನುಜಾಯ ನಮಃ ।
ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ

# ನ್ಯಾಸದಶಕಮ್

## ತನಿಯ್ಯ

ಶ್ರೀಮಾನ್ವೇಂಕಟನಾಥಾರ್ಯಃ ಕವಿತಾರ್ಕಿಕಕೇಸರೀ ।
ವೇದಾಂತಾಚಾರ್ಯವರ್ಯೋ ಮೇ ಸನ್ನಿಧತ್ತಾಂ ಸದಾ ಹೃದಿ ॥

ಕವಿ, ತಾರ್ಕಿಕ, ಕೇಸರೀ = ಕವಿಗಳು, ತಾರ್ಕಿಕರುಗಳಲ್ಲಿ ಸಿಂಹದಂತಿರುವ, ವೇದಾಂತ ಆಚಾರ್ಯವರ್ಯಃ = ವೇದಾಂತ ಆಚಾರ್ಯರೂ, ಶ್ರೇಷ್ಠರೂ ಆದ, ಶ್ರೀಮಾನ್ = ಜ್ಞಾನ ವೈರಾಗ್ಯ ಮೊದಲಾದ ಸಮಸ್ತ ಕಲ್ಯಾಣಗುಣ ಸಂಪನ್ನರಾದ, ವೇಂಕಟನಾಥಾರ್ಯಃ = ವೇಂಕಟನಾಥಾಚಾರ್ಯರು, ಮೇ = ನನ್ನ, ಹೃದಿ = ಹೃದಯದಲ್ಲಿ, ಸದಾ = ಎಂದೆಂದಿಗೂ ಸನ್ನಿಧತ್ತಾಂ-ನೆಲಸಿರಲಿ.

ತಾತ್ಪರ್ಯ :—ಶ್ರೀ ದೇಶಿಕರ ನಾಮಕರಣದ ಹೆಸರು ವೇಂಕಟನಾಥರೆಂದು. ವೇದಾಂತ ಚಾರ್ಯರೆಂಬುದು ಶ್ರೀರಂಗನಾಥಸ್ವಾಮಿಯ ದಿವ್ಯಾಜ್ಞೆಯಿಂದ ಬಂದ ಬಿರುದು. ಈ ಶ್ಲೋಕವು (ತನಿಯ್ಯ) ಅವರ ಗ್ರಂಥಗಳನ್ನು ಪ್ರಾರಂಭಮಾಡುವುದಕ್ಕೆ ಮುಂಚೆ ಸಂಪ್ರದಾಯದಂತೆ ಸೇವಿಸಲ್ಪಡುತ್ತಿರುವ ಬಿಡಿ ಶ್ಲೋಕ.

ಇದರ ಹೆಸರೇ ತಿಳಿಸುವಂತೆ, " ನ್ಯಾಸದಶಕ"ವು ಪ್ರಪತ್ತಿ ಮಾರ್ಗವನ್ನು ವಿವರಿಸುವ ಹತ್ತು ಶ್ಲೋಕಗಳುಳ್ಳ ಸಂಕ್ಷೇಪ ಪ್ರಬಂಧ. ಶ್ರೀವೇದಾಂತ ದೇಶಿಕರಿಂದ ರಚಿಸಲ್ಪಟ್ಟದ್ದು. "ನ್ಯಾಸ"ಕ್ಕೆ ಪ್ರಪತ್ತಿ, ಶರಣಾಗತಿ, ಭರನ್ಯಾಸ ಎಂಬ ಸಮಾನಾರ್ಥವನ್ನು ಕೊಡುವ ಪರ್ಯಾಯ ಪದಗಳೂ ಬಳಕೆಯಲ್ಲಿವೆ. ಅನಾದಿ ವೇದಕಾಲದಿಂದ ಬಂದಿರತಕ್ಕ ಇದು ಅನೇಕ ಋಷಿಗಳು, ಆಳ್ವಾರರುಗಳು ಮತ್ತು ಹಿಂದಿನ ಆಚಾರ್ಯರುಗಳು ಅನುಷ್ಠಿಸಿದ ಮಾರ್ಗವೂ ಆಗಿರುತ್ತದೆ ವೇದ, ಬ್ರಹ್ಮಸೂತ್ರ, ಭಗವದ್ಗೀತಾ ಮೊದಲಾದ ಪ್ರಸ್ಥಾನತ್ರಯಗಳ ಆಧಾರದಮೇಲೆ ಈ ಶಾಸ್ತ್ರದ ತತ್ತ್ವನಿರೂಪಣೆ

ಯನ್ನು ಮಾಡಿ, ಅದು ಜಾತಿ ಲಿಂಗ, ವರ್ಣ, ಆಶ್ರಮ ಮುಂತಾದ ಯಾವ ಭೇದಗಳೂ ಇಲ್ಲದೆ ಎಲ್ಲರಿಗೂ ಸಮಾನಾಗಿ ತೆರೆದಿರುವ ಸುಲಭ ಮೋಕ್ಷ ಮಾರ್ಗ ಎಂಬುದನ್ನು ವಿಶದಪಡಿಸಿ, ಅದರ ಅನುಷ್ಠಾನಕ್ರಮ, ಅವಶ್ಯ ಕರ್ತವ್ಯವನ್ನೂ ವಿವರಿಸಿ, ದೃಢವಾದ ಅಸ್ತಿಭಾರದಮೇಲೆ ಪ್ರಪತ್ತಿ ಸಿದ್ಧಾಂತವನ್ನು ಸ್ಥಾಪಿಸಿರುವುದು, ಶ್ರೀ ವೇದಾಂತದೇಶಿಕರವರು ನಮ್ಮ ಸಂಸ್ಕೃತಿ ಮತಗಳಿಗೆ ಮಾಡಿರುವ ದೊಡ್ಡ ಉಪಕಾರ. ಸಂಸ್ಕೃತ. ತಮಿಳು, ಮಿಶ್ರಭಾಷೆಯಾದ ಮಣಿಪ್ರವಾಳ, ಇವುಗಳಲ್ಲಿ ಅವರ ಸಹಜವಾದ ಅಸಾಧಾರಣ ಪ್ರತಿಭೆಯಿಂದ ಹೇರಳ ಗ್ರಂಥಗಳನ್ನು ರಚಿಸಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಪ್ರಚಾರಪಡಿಸಿರುತ್ತಾರೆ. ಅವುಗಳಲ್ಲಿ ಒಂದಾದ ಈ ನ್ಯಾಸದಶಕದ ಹತ್ತೇ ಅನುಷ್ಟುಪ್ ಶ್ಲೋಕಗಳಲ್ಲಿ ಪ್ರಪತ್ತಿಯ ಮುಖ್ಯಾಂಶಗಳನ್ನು ಸಂಕ್ಷೇಪವಾಗಿ, ಸಾಮಾನ್ಯರಿಗೂ ತಿಳಿಯುವಂತೆ ಸುಲಭ ಶೈಲಿಯಲ್ಲಿ ಉಪದೇಶಿಸಿರುತ್ತಾರೆ. ಪದಗಳು ಸರಳವಾಗಿದ್ದರೂ, ಅರ್ಥದಿಂದ ತುಂಬಿ ತುಳುಕುತ್ತ, ಪಂಡಿತರುಗಳಿಗೂ ಸೂತ್ರದಂತಿರುತ್ತದೆ. ಇಂತಹ ಗ್ರಂಥದ ಕನ್ನಡ ಅನುವಾದ, ತಾತ್ಪರ್ಯ, ಟೀಕೆಗಳನ್ನು ಕೆಳಗೆ ಕೊಡಲಾಗಿದೆ

ಅಹಂ ಮದ್ರಕ್ಷಣಭರೋ ಮದ್ರಕ್ಷಣ ಫಲಂ ತಥಾ ।
ನ ಮಮ ಶ್ರೀಪತೇರೇವೇತ್ಯಾತ್ಮಾನಂ ನಿಕ್ಷಿಪೇದ್ಬುಧಃ ॥ ೧ ॥

ಅರ್ಥ :—ಅಹಂ = ನಾನೂ, ಮತ್ ರಕ್ಷಣ ಭರಃ = ನನ್ನನ್ನು ಕಾಪಾಡುವ ಹೊರೆಯೂ, ತಥಾ = ಹಾಗೆಯೇ, ಮತ್ ರಕ್ಷಣಫಲಂ = ನನ್ನನ್ನು ಕಾಪಾಡುವುದರ ಫಲವೂ, ನಮಮ = ನನ್ನವಲ್ಲ, ಶ್ರೀಪತೇಃ ಏವ = ಲಕ್ಷ್ಮೀನಾರಾಯಣನದೇ, ಇತಿ = ಹೀಗೆ, ಬುಧಃ = ಪಂಡಿತನು, ಆತ್ಮಾನಂ = ತನ್ನನ್ನು ಅಂದರೆ ಸ್ವಾತ್ಮನನ್ನು ನಿಕ್ಷಿಪೇತ್ = ಸಮರ್ಪಿಸಬೇಕು.

ತಾತ್ಪರ್ಯ :—ನನ್ನನ್ನೂ ನನ್ನವರೆಂದು ಹೇಳಲ್ಪಡುವ ಪತ್ನಿ ಪುತ್ರಾದಿಗಳನ್ನೂ ರಕ್ಷಿಸುವ ಯೋಗ್ಯತೆ ಮತ್ತು ಶಕ್ತಿ ನನಗಿಲ್ಲ ; ನಾನೂ ನನ್ನವರೂ, ನನ್ನವೂ ಎಲ್ಲಾ ಲಕ್ಷ್ಮೀನಾರಾಯಣನಿಗೆ ಸೇರಿ ಅವನಿಗೋಸ್ಕರವೇ ಇರತಕ್ಕ "ಶೇಷ"ರುಗಳು ; ಇವುಗಳನ್ನೆಲ್ಲಾ ರಕ್ಷಿಸುವ ಹೊಣೆಯೂ, ಎಲ್ಲರನ್ನೂ ರಕ್ಷಿಸುವ ಎಲ್ಲರಿಗೂ ಒಡೆಯನಾದ, ಅಂದರೆ ಶೇಷಿ

ಯಾದ, ಶ್ರಿಯಃಪತಿಗೇ ಸೇರಿದುದು; ಹಾಗೆಯೆ ಅದರ ಫಲವೂ ಅವನದೇ ಎಂಬ ಕವಲವ ನಿಶ್ಚಯದಿಂದ ಆತ್ಮನನ್ನು ಅವನಲ್ಲಿ ಸಮರ್ಪಿಸುವುದೇ ಪ್ರಪತ್ತಿ ಅಥವಾ ಆತ್ಮನಿಕ್ಷೇಪ ಎಂದು ಈ ಶ್ಲೋಕವು ಪ್ರಪತ್ತಿಯ ಸ್ವರೂಪ ಸ್ವಭಾವವನ್ನು ವಿವರಿಸುತ್ತದೆ.

ಪ್ರಪತ್ತಿಯು ಹೀಗೆ ಮೂರು ಅಂಶ ಅಥವಾ ಭಾಗಗಳನ್ನು ಒಳಗೊಂಡಿರುವುದು—ಸ್ವರೂಪಸಮರ್ಪಣ, ಭರಸಮರ್ಪಣ, ಫಲಸಮರ್ಪಣ. ಈ ಶ್ಲೋಕವಲ್ಲಿ ಹೇಳಿರುವ "ಅಹಂ ನಮಮ" ಎಂಬ ಪದಗಳಿಂದ ಸೂಚಿಸಲ್ಪಟ್ಟ "ಶೇಷಶೇಷಿ" ಭಾವದಿಂದ ತನ್ನನ್ನೂ, ತನ್ನವುಗಳನ್ನೂ (ಆತ್ಮ, ಆತ್ಮೀಯ) ಭಗವಂತನಿಗೆ ಸಮರ್ಪಿಸುವುದೇ ಸ್ವರೂಪಸಮರ್ಪಣ. ಇವುಗಳ ರಕ್ಷಣೆಯ ಹೊರೆಯನ್ನು ಸಮರ್ಪಿಸುವುದೇ "ಮದ್ರಕ್ಷಣಭರಃ ನಮಮ" ಎಂಬ ಪದಗಳಿಂದ ಸೂಚಿಸಲ್ಪಟ್ಟ ಭರಸಮರ್ಪಣ. ಫಲಸಮರ್ಪಣವು "ಮದ್ರಕ್ಷಣ ಫಲಂ ನಮಮ" ಎಂಬ ಪದಗಳಿಂದ ಸುವ್ಯಕ್ತಪಡಿಸಲ್ಪಟ್ಟಿರುತ್ತದೆ. "ಅಹಂ ನಮಮ" ಮೊದಲಾದ ಈ ಮೂರು ವಾಕ್ಯಗಳು ವಿಶಿಷ್ಟಾದ್ವೈತಸಿದ್ಧಾಂತದ ಪ್ರಕಾರ ತತ್ತ್ವ, ಹಿತ ಮತ್ತು ಪುರುಷಾರ್ಥಗಳನ್ನು ಸಂಕ್ಷೇಪವಾಗಿ ವಿವರಿಸಿವೆ. ಇವುಗಳನ್ನು ಚೆನ್ನಾಗಿ ತಿಳಿದವನೇ ಈ ಶ್ಲೋಕದಲ್ಲಿ "ಬುಧ"ನೆಂದು ಹೇಳಲ್ಪಟ್ಟಿರುವನು.

ನ್ಯಸ್ಯಾಮ್ಯಕಿಂಚನಃ ಶ್ರೀಮನ್ನನುಕೂಲೋನ್ಯವರ್ಜಿತಃ ।
ವಿಶ್ವಾಸಪ್ರಾರ್ಥನಾಪೂರ್ವಮಾತ್ಮರಕ್ಷಾಭರಂ ತ್ವಯಿ ॥ ೨ ॥

ಅರ್ಥ :— ಶ್ರೀಮನ್ = ಸದಾ ಲಕ್ಷ್ಮಿಯೊಡಗೂಡಿರುವವನೆ ! ಅಕಿಂಚನಃ = ನಿನ್ನನ್ನು ಪಡೆಯಲು ಬೇರೆ ಉಪಾಯವನ್ನು ತಿಳಿದುಕೊಂಡು ಅದನ್ನು ಅನುಷ್ಠಾನಮಾಡಲು ತಕ್ಕ ಶಕ್ತಿ, ಯೋಗ್ಯತೆ ಇಲ್ಲದವನೂ, ಅನುಕೂಲಃ = ನಿನ್ನ ಇಚ್ಛೆಗೆ ಅನುಕೂಲವಾಗಿ ನಡೆಯಬೇಕೆಂದು ದೃಢಮನಸ್ಸು ಮಾಡಿರುವನೂ, ಅನ್ಯವರ್ಜಿತಃ = ನಿನ್ನ ಇಚ್ಛೆಗೆ ಬೇರೆಯಾದ ಪ್ರತಿಕೂಲಮಾರ್ಗವನ್ನು ಬಿಟ್ಟಿರುವನೂ (ಆದ ನಾನು) ವಿಶ್ವಾಸ, ಪ್ರಾರ್ಥನಾ, ಪೂರ್ವಂ = ನೀನು ನನ್ನನ್ನು ಕಾಪಾಡುವೆ ಎಂಬ ದೃಢವಾದ ನಂಬಿಕೆಯಿಂದ, (ನಿನ್ನಲ್ಲಿ) ಪ್ರಾರ್ಥನೆಯನ್ನು ಮುಂದಿಟ್ಟು, ಆತ್ಮ ರಕ್ಷಾಭರಂ = ನನ್ನ ರಕ್ಷಣೆಯ ಹೊರೆಯನ್ನು. ತ್ವಯಿ = ನಿನ್ನಲ್ಲಿ, ನ್ಯಸ್ಯಾಮಿ = ಇಡುತ್ತೇನೆ, ಸಮರ್ಪಿಸುತ್ತೇನೆ.

ತಾತ್ಪರ್ಯ :—ಹಿಂದಿನ ಶ್ಲೋಕದಲ್ಲಿ, ಸ್ವರೂಪ, ಭರ, ಫಲಸಮರ್ಪಣ ಪೂರ್ವಕ, ಆತ್ಮನಿಕ್ಷೇಪವನ್ನು ಮಾಡಬೇಕು ("ಆತ್ಮಾನಂ ನಿಕ್ಷಿಪೇತ್") ಎಂದು ಉಪದೇಶಿಸಿದರು. ಈ ಶ್ಲೋಕದಲ್ಲಿ "ನ್ಯಸ್ಯಾಮಿ ಅಕಿಂಚನಃ" ಎಂದು ಅಧಿಕಾರಿಯು ಪ್ರಪತ್ತಿಮಾಡಿಕೊಳ್ಳುವ ವಿಧಾನವನ್ನು, ತಾವು ಅನುಷ್ಠಿಸಿದ ರೀತಿಯಲ್ಲಿ ಉಪದೇಶಿಸುತ್ತಾರೆ. ಪ್ರಪತ್ತಿ ಮಾಡಿಕೊಳ್ಳದವನು, ತನಗೆ ಇನ್ನು ಬೇರೆ ಮಾರ್ಗವನ್ನು ಅನುಸರಿಸುವ ಯೋಗ್ಯತೆಯುಸಾಮರ್ಥ್ಯವಿಲ್ಲ. ಶ್ರೀಮನ್ನಾರಾಯಣನ ಚರಣ ಬಿಟ್ಟು ಬೇರೇ ಗತಿ ಇಲ್ಲ ಎಂಬ ಆಕಿಂಚನ್ಯ ಮತ್ತು ಅನನ್ಯಗತಿಯು ದೃಢಮನೋಭಾವದಿಂದ ಶ್ರಿಯಃಪತಿ ನಾರಾಯಣನಲ್ಲಿ ಶರಣಾಗತನಾಗಬೇಕು ಎಂಬ ಅಂಶವನ್ನು ವಿಶೇಷಿಸಿ ಉಪದೇಶಿಸಿರುತ್ತಾರೆ. ಪರಮ ಗುರುಗಳಾದ ಆಳವಂದಾರ್ರವರು ಸ್ತೋತ್ರರತ್ನದಲ್ಲಿ ಅನುಗ್ರಹಿಸಿರುವ " ಅಕಿಂಚನಃ ಅನನ್ಯಗತಿಃ ಶರಣ್ಯಃ ತ್ವತ್ಪಾದಮೂಲಂ ಶರಣಂ ಪ್ರಪದ್ಯೆ " ಎಂಬುದು ಇದನ್ನು ಚೆನ್ನಾಗಿ ವ್ಯಕ್ತಪಡಿಸಿರುತ್ತದೆ.

ಕರ್ಮಾನುಷ್ಠಾನದಲ್ಲಿ ಎರಡು ಭಾಗ ಅಥವಾ ಅಂಶಗಳುಂಟು, ಅಂಗಿ, ಅಂಗವೆಂದು. ಮುಖ್ಯ ಕರ್ಮವು ಅಂಗಿ. ಅದು ಸರಿಯಾಗಿ ನೆರವೇರಲು ಅವಶ್ಯಕವಾದ ಇತರ ಕರ್ಮಗಳು ಅಂಗಗಳು. ಈ ಅಂಗಗಳೊಡನೆ ಮುಖ್ಯ ಕರ್ಮವನ್ನು ಮಾಡುವುದೇ ಸಾಂಗಾನುಷ್ಠಾನ, ಸರಿಯಾದ ಅನುಷ್ಠಾನ. ಹಾಗೆಯೇ ಪ್ರಪತ್ತಿಯ ಸಾಂಗಾನುಷ್ಠಾನಕ್ಕೆ ಅವಶ್ಯಕವಾಗಿರುವ ಅಂಗಗಳು ಐದು ಎಂದು ವಿವರಿಸಲ್ಪಟ್ಟಿವೆ.

1) ಭಗವಂತನ ಇಚ್ಛೆಗೆ ಅನುಕೂಲನಾಗಿ ನಡೆದುಕೊಳ್ಳುವನೆಂಬ ದೃಢಸಂಕಲ್ಪ—ಆನುಕೂಲ್ಯಸಂಕಲ್ಪ.

2) "ಪ್ರಾತಿಕೂಲ್ಯಸ್ಯ ವರ್ಜನಂ" ಶ್ರೀಮನ್ನಾರಾಯಣನ ಇಷ್ಟಕ್ಕೆ ವಿರೋಧವಾದುದನ್ನು ಮನಸ್ಸಿನಿಂದಾಗಲಿ, ಮಾತಿನಿಂದಾಗಲಿ, ಕರ್ಮದಿಂದಾಗಲಿ ಮಾಡುವದನ್ನು ಬಿಟ್ಟುಬಿಡುವುದು.

ಭಗವಂತನ ಇಚ್ಛೆಯನ್ನು ಅವನ ಆಜ್ಞಾರೂಪವಾದ ಶಾಸ್ತ್ರಗಳಿಂದ ತಿಳಿಯಬೇಕು, "ತಸ್ಮಾತ್ ಶಾಸ್ತ್ರಂ ಪ್ರಮಾಣಂತೆ, ಕಾರ್ಯಾಕಾರ್ಯ ವ್ಯವಸ್ಥಿತಾ" ಎಂದೂ ಗೀತೆಯಲ್ಲಿ ಅವನೇ ಹೇಳಿರುವಂತೆ ಶಾಸ್ತ್ರಗಳು

ಮಾಡಬೇಕೆಂದು ವಿಧಿಸಿರುವುದನ್ನು ಮಾಡುವುದು. ಕೂಡದೆಂದು ನಿಷೇಧಿಸಿರುವುದನ್ನು ಬಿಡುವುದು. ಇವು ಮೇಲೆ ಹೇಳಿದ 1, 2ನೆಯ ಅಂಗಗಳು ಮತ್ತು ಈ ಶ್ಲೋಕದಲ್ಲಿ ಅನುಕೂಲಃ ಅನ್ಯವರ್ಜಿತಃ ಎಂಬುವ ಪದಗಳಿಂದ ಸಂಕ್ಷೇಪವಾಗಿ ವಿವರಿಸಲ್ಪಟ್ಟಿವೆ.

3) ಕಾರ್ಪಣ್ಯ :—ಮೇಲೆ ಹೇಳಿದ ಅಕಿಂಚನ, ಅನನ್ಯಗತಿಯ ಮನೋಭಾವದಿಂದ ಭಗವಂತನಲ್ಲಿ ವಿನಯ ಭಕ್ತಿಯೊಂದಿಗೆ, ನಮಸ್ಕಾರ ಪೂರ್ವಕವಾಗಿ ಅವನಿಗೆ ಶರಣಾಗತನಾಗುವುದು. ಇದೇ ಈ ಶ್ಲೋಕದಲ್ಲಿ "ಅಕಿಂಚನಃ" ಎಂದು ಹೇಳಲ್ಪಟ್ಟಿರುವುದು.

4) ಮಹಾವಿಶ್ವಾಸಃ–ಶ್ರೀಮನ್ನಾರಾಯಣನೊಬ್ಬನೇ ನಮ್ಮನ್ನು ರಕ್ಷಿಸಬಲ್ಲವನು. ಅವನೇ ಶರಣುಹೊಂದಿದ ನನ್ನನ್ನು ರಕ್ಷಿಸುತ್ತಾನೆ ಎಂದು ಯಾವ ಸಂಶಯವೂ ಇಲ್ಲದ ದೃಢನಂಬಿಕೆ. ಇದೇ ಈ ಶ್ಲೋಕದಲ್ಲಿ "ವಿಶ್ವಾಸ ಪೂರ್ವಕಂ" ಎಂಬ ಪದಗಳಿಂದ ಸೂಚಿಸಲ್ಪಟ್ಟಿರುತ್ತೆ.

5) ಗೋಪ್ತೃತ್ವವರಣಂ :—ನಿನ್ನನ್ನು ಸೇರಲು ಬೇರೆ ಮಾರ್ಗವನ್ನು ಅರಿಯೆ, ಅವುಗಳನ್ನು ಅನುಷ್ಠಿಸುವ ಶಕ್ತಿಯೂ ಇಲ್ಲ. ಆದುದರಿಂದ ನೀನೆ ಉಪಾಯಸ್ಥಾನದಲ್ಲಿ ನಿಂತು ನನ್ನನ್ನು ರಕ್ಷಿಸಬೇಕು ಎಂದು ಪ್ರಾರ್ಥಿಸುವುದು."ಪ್ರಾರ್ಥನಾ ಪೂರ್ವಂ" ಎಂಬ ಶ್ಲೋಕದ ಪದವು ಈ ಅಂಗವನ್ನು ವಿವರಿಸುತ್ತದೆ.

ಹೀಗೆ, ಐದು ಅಂಗಗಳೊಡನೆ ಸೇರಿದ ಆತ್ಮನಿಕ್ಷೇಪ ಅಥವಾ ಆತ್ಮರಕ್ಷೆಯ ಭರವನ್ನು ಸಮರ್ಪಿಸುವುದೇ ಪ್ರಪತ್ತಿ ಎಂಬುವುದು "ಅಕಿಂಚನಃ, ಆತ್ಮರಕ್ಷಾಭರಂ ತ್ವಯಿ ನ್ಯಸ್ಯಾಮಿ"ಎಂಬ ಪದಗಳಿಂದ ವ್ಯಕ್ತಪಡಿಸಲಾಗಿದೆ

ಈ ಪ್ರಪತ್ತಿಗೆ ಉದ್ದೇಶ್ಯನಾದವನು ಸದಾ ಲಕ್ಷ್ಮೀದೇವಿಯೊಡನೆ ಕೂಡಿದ ನಾರಾಯಣನೆ ಎಂಬ ಮುಖ್ಯ ತತ್ತ್ವವನ್ನು ಶ್ರೀಮನ್ ಎಂಬ ಸಂಬೋಧನೆಯೊಡನೆ ಹೇಳಿರುವ"ತ್ವಯಿ"ಎಂಬ ಪದಗಳಿಂದ ತಿಳಿಸಲಾಗಿದೆ.

ಹೀಗೆ ಒಂದು ಅನುಷ್ಟುಪ್ ಶ್ಲೋಕದಲ್ಲಿ ಪ್ರಪತ್ತಿ ಶಾಸ್ತ್ರದ ಮುಖ್ಯ ತತ್ತ್ವಗಳು, ಅಂಗಗಳು ಅದನ್ನು ಮಾಡಿಕೊಳ್ಳುವ ವಿಧಾನ ಎಲ್ಲವನ್ನು ಅದ್ಭುತ ರೀತಿಯಲ್ಲಿ ಸಂಕ್ಷೇಪವಾಗಿ ದೇಶಿಕರು ವಿವರಿಸಿದ್ದಾರೆ.

ಸ್ವಾಮಿನ್ ಸ್ವಶೇಷಂ ಸ್ವವಶಂ ಸ್ವಭರತ್ವೇನ ನಿರ್ಭರಂ ।
ಸ್ವದತ್ತ ಸ್ವಧಿಯಾ ಸ್ವಾರ್ಥಂ ಸ್ವಸ್ಮಿನ್ನ್ಯಸ್ಯಸಿ ಮಾಂ ಸ್ವಯಮ್॥೩॥

ಅರ್ಥ :— ಸ್ವಾಮಿನ್ = ಎಲ್ಲ ಲೋಕಕ್ಕೂ ಒಡೆಯನೆ ! ಸ್ವಶೇಷಂ = ನಿನಗೇ "ಶೇಷ"ನಾಗಿಯೂ, ಸ್ವವಶಂ = ನಿನಗೇ ಅಧೀನನಾಗಿಯೂ, ಮಾಂ = ನನ್ನನ್ನು, ಸ್ವದತ್ತ = ನೀನೇ ದಯಪಾಲಿಸಿರುವ, ಸ್ವಧಿಯಾ = ನಿನ್ನ ಬುದ್ಧಿಯಿಂದ ಸ್ವಾರ್ಥಂ = ನಿನಗೋಸ್ಕರವೆ, ಸ್ವಭರತ್ವೇನ = ನೀನು ಹೊರೆಯನ್ನು ಹೊತ್ತಿರುವುದರಿಂದ, ನಿರ್ಭರಂ = ನನ್ನನ್ನು ಹೊರೆಯಿಲ್ಲದವನಾಗಿ ಮಾಡಿ, ಸ್ವಸ್ಮಿನ್ = ನಿನ್ನಲ್ಲಿಯೇ, ಸ್ವಯಂ = ನೀನೇ, ನ್ಯಸ್ಯಸಿ = ಸಮರ್ಪಿಸಿಕೊಂಡಿರುತ್ತೀಯೆ.

ತಾತ್ಪರ್ಯ :— ಹಿಂದಿನ ಶ್ಲೋಕದಲ್ಲಿ ಐದು ಅಂಗಗಳಿಂದ ಕೂಡಿದ ಸಾಂಗ ಪ್ರಪತ್ತಿಯನ್ನು ವಿವರಿಸಿ, ಈ ಶ್ಲೋಕದಲ್ಲಿ ಈ ಪ್ರಪತ್ತಿ ಮೊದಲಿನಿಂದ ಕೊನೆಯವರೆಗೂ ಎಲ್ಲವನ್ನೂ ಅವನೆ ನಡೆಸಿಕೊಳ್ಳುವನು, ನಾನು ಅವನಿಗೆ ಸರ್ವ ಕಾಲದಲ್ಲಿಯೂ ಶೇಷ, ಸ್ವತಂತ್ರನಲ್ಲ, ತಾನೇ ತನ್ನಲ್ಲಿ ನನ್ನ ಆತ್ಮನಿಕ್ಷೇಪವನ್ನು ಮಾಡಿಸಿಕೊಂಡು ನನ್ನ ಮೇಲೆ ಯಾವ ಹೊರೆ ಹೊಣೆ ಇಲ್ಲದ ಹಾಗೆ ಮಾಡಿರುತ್ತಾನೆ ಎಂಬುದನ್ನು "ಸ್ವಯಂ" ತಾನೇ ಎಂಬ ಪದದ ಎಂಟು ಸಲ ಆವೃತ್ತಿಯಿಂದ ಒತ್ತಿ ಹೇಳಿರುತ್ತಾರೆ. ಒಂದನೇ ಶ್ಲೋಕದ "ನಿಕ್ಷಿಪೇತ್" ಸಮರ್ಪಣೆಮಾಡಬೇಕು ಎಂಬುದು ಎರಡನೆಯ ಶ್ಲೋಕದಲ್ಲಿ "ನ್ಯಸ್ಯಾಮಿ", ಸಮರ್ಪಿಸುತ್ತೇನೆ ಎಂಬುದಾಗಿ, ಈ ಮೂರನೆಯ ಶ್ಲೋಕದಲ್ಲಿ ಸ್ವಯಂ ಸ್ವಸ್ಮಿನ್ನ್ಯಸ್ಯಸಿ ನೀನೇ ನಿನ್ನಲ್ಲಿ ನ್ಯಾಸಮಾಡಿ ಮಾಡಿಕೊಂಡಿರುತ್ತಿ ಎಂದು ಪರಿಣಮಿಸಿದೆ.

ನಮ್ಮಾಳ್ವಾರ್ ಅವರು ತಿರುವಾಯ್ಮೊಳಿ ಪಾಶುರದಲ್ಲಿ ನಾನು ನಮ್ಮದು (ಅಹಂ ಮಮ) ಎಂಬ ಭಾವನೆಯನ್ನು ಬೇರುಸಹಿತ ಕಿತ್ತು ಹಾಕಿ (ನೀರ್‌ನುಮದೆನ್ರಿವೈ ವೇರ್ಮುತಲ್ಮಾಯ್‌ತ್ತು) ಭಗವಂತನ ಶರಣವನ್ನು ಸೇರಿ (ಇರೈಶೇರ್ಮಿನ್) ಎಂದು ಉಪದೇಶ ಮಾಡಿರುತ್ತಾರೆ. ಮೋಕ್ಷಾಪೇಕ್ಷಿಯು ಕರ್ತೃತ್ವ ಬುದ್ಧಿ, ಮಮತಾ ಬುದ್ಧಿ, ಫಲಾಪೇಕ್ಷೆಯನ್ನು ಬಿಟ್ಟು ನಿಯತಕರ್ಮವನ್ನು ಮಾಡುವುದೇ ಸಾತ್ತ್ವಿಕ ತ್ಯಾಗ ಆದರಂತೆ ಈ ಶ್ಲೋಕದಲ್ಲಿ ಸಾಂಗಪ್ರಪತ್ತಿಯ ಸಾತ್ತ್ವಿಕ ತ್ಯಾಗವು ವಿವರ

ಸಲ್ಪಟ್ಟಿರುತ್ತದೆ. ಪ್ರಪತ್ತಿಯು ನಾನು ಮಾಡಿದುದಲ್ಲ, ನನ್ನದೂ ಅಲ್ಲ. ಅದರ ಫಲವೂ ನನ್ನದಲ್ಲ, ಎಲ್ಲಾ ಶ್ರೀ ನಾರಾಯಣನವೆ ಎಂಬುದನ್ನು "ಸ್ವಸ್ಮಿನ್ ಸ್ವಯಂ ಸ್ವಾರ್ಥಂ ಮಾಂ ನ್ಯಸ್ಯಸಿ" ಎಂಬ ಪದಗಳಿಂದ ವಿಶದ ಪಡಿಸಿರುತ್ತಾರೆ.

ಪ್ರಪತ್ತಿಯಲ್ಲೂ ಭಕ್ತಿಯೋಗ ಮೊದಲಾದ ಇತರ ಮೋಕ್ಷೋಪಾಯಗಳಲ್ಲೂ ಈ ಸಾತ್ತ್ವಿಕ ತ್ಯಾಗ ಅವಶ್ಯಕ. ಫಲಾಪೇಕ್ಷೆಯಿಂದ ಅನುಷ್ಠಿಸಲ್ಪಡುವ ಉಪಾಯಗಳಲ್ಲಿ, ಸಾತ್ತ್ವಿಕ ತ್ಯಾಗ ಭಾವನೆ ಅಷ್ಟು ಇಲ್ಲವೆಂಬುದು ಹೇಳಬೇಕಾಗಿಯೇ ಇಲ್ಲ.

ಶ್ರೀಮನ್ನಭೀಷ್ಟವರದ ತ್ವಾಮಸ್ಮಿ ಶರಣಂ ಗತಃ ।
ಏತದ್ದೇಹಾವಸಾನೇ ಮಾಂ ತ್ವತ್ಪಾದಂ ಪ್ರಾಪಯ ಸ್ವಯಂ ॥ ೪ ॥

ಅರ್ಥ :—ಶ್ರೀಮನ್ = ಲಕ್ಷ್ಮಿಯನ್ನು ಎಡಬಿಡದೆ ಒಡಗೂಡಿರುವ ಅಭೀಷ್ಟವರದ = ಆಶ್ರಿತರುಗಳಿಗೆ ಇಷ್ಟವಾದ ವರಗಳನ್ನು ಕೊಡುವ, ಸ್ವಾಮಿಯೇ! ತ್ವಾಂ = ನಿನ್ನನ್ನು, ಶರಣಂ = ರಕ್ಷಕನನ್ನಾಗಿ, ಗತಃ = ಹೊಂದಿದವನಾಗಿರುವೆನು. ಏತತ್ ದೇಹ ಅವಸಾನೇ = ಈ ಶರೀರದ ಕೊನೆಗಾಲದಲ್ಲಿ, ಮಾಂ = ನನ್ನನ್ನು, ತ್ವತ್ಪಾದಂ = ನಿನ್ನ ಪಾದವನ್ನು, ಸ್ವಯಂ = ನೀನೇ, ಪ್ರಾಪಯ = ಸೇರಿಸು.

ತಾತ್ಪರ್ಯ : — ಶರಣಾಗತರಾದವರಿಗೆ ಇಷ್ಟವಾದ ವರಗಳನ್ನು ದಯಪಾಲಿಸುವ ಸ್ವಾಮಿ ರೂಪನಾದ, ಲಕ್ಷ್ಮೀನಾರಾಯಣನೆ! ನಾನು ನಿನ್ನ ಶರಣಾಗತನಾಗಿರುತ್ತೇನೆ. ನೀನೇ ಈ ಶರೀರದ ಕೊನೆಯಲ್ಲಿ ನನ್ನನ್ನು ನಿನ್ನ ಪಾದದಲ್ಲಿ ಸೇರಿಸಿಕೊಳ್ಳಬೇಕು.

ಕಳೆದ ಮೂರು ಶ್ಲೋಕಗಳಲ್ಲಿ ರಹಸ್ಯಮಂತ್ರ "ದ್ವಯ"ದ ಮೊದಲನೆ ಪಾದದಲ್ಲಿ ನಿರ್ದೇಶಿಸಲ್ಪಟ್ಟಿರುವ ಭರನ್ಯಾಸವು ವಿವರಿಸಲ್ಪಟ್ಟಿತು. ಈ ಶ್ಲೋಕದಲ್ಲಿ, ಅದರ ಎರಡನೆಯ ಪಾದದಲ್ಲಿ ಹೇಳಿರುವ ಫಲವನ್ನು ಕ್ರಮ ಅನುಸರಿಸಿ ಪ್ರಾರ್ಥಿಸುತ್ತಾರೆ. ಈ ಮಂತ್ರರತ್ನದ ಅಂತರಾರ್ಥ ರಹಸ್ಯ, ಆಚಾರ್ಯರುಗಳ ಉಪದೇಶಗಳಿಂದ ತಿಳಿದುಕೊಳ್ಳಬೇಕು.

ಮೋಕ್ಷಾರ್ಥನಾಗಿ ಮಾಡಿಕೊಳ್ಳುವ ಭರನ್ಯಾಸ ಅಥವಾ ಪ್ರಪತ್ತಿ ಎರಡು ಬಗೆಯದು, ಆರ್ತ ಪ್ರಪತ್ತಿ, ದೃಪ್ತಪ್ರಪತ್ತಿ ಆರ್ತಪ್ರಪತ್ತಿಯಲ್ಲಿ

ಒಡನೆಯೆ ಮೋಕ್ಷವನ್ನೂ, ದೃಪ್ತಪ್ರಪತ್ತಿಯಲ್ಲಿ ಈ ವರ್ತಮಾನ ಜೀವ ಕಳೆದನಂತರ ಮೋಕ್ಷವನ್ನೂ ಶರಣಾಗತನು ತನ್ನ ಇಷ್ಟದಂತೆ ಆ ವೇಳೆಯಲ್ಲಿ ಪ್ರಾರ್ಥಿಸುವನು. ಈ ಶ್ಲೋಕದಲ್ಲಿ ದೃಪ್ತಪ್ರಪತ್ತಿ ಪ್ರಾರ್ಥಿಸಲ್ಪಟ್ಟಿರುತ್ತೆ. ಮೋಕ್ಷಕ್ಕೆ ಲಕ್ಷ್ಮೀನಾರಾಯಣನೆ ಸಿದ್ಧನಾಗಿರುವ ಉಪಾಯ. ಅವನೇ ಉಪೇಯ ಎಂದರೆ ಉಪಾಯದ ಗುರಿ, ಅದರಿಂದ ಹೊಂದಲ್ಪಡುವನು ಎಂಬ ತತ್ತ್ವವನ್ನು ಈ ಶ್ಲೋಕ ನಿರೂಪಿಸುತ್ತದೆ.

ತ್ವಚ್ಛೇಷತ್ವೇ ಸ್ಥಿರಧಿಯಂ ತ್ವತ್ಪ್ರಾಪ್ತ್ಯೇಕಪ್ರಯೋಜನಂ ।
ನಿಷಿದ್ಧಕಾಮ್ಯರಹಿತಂ, ಕುರು ಮಾಂ ನಿತ್ಯಕಿಂಕರಂ ॥

**ಅರ್ಥ** :— ಮಾಂ = ಹೀಗೆ ಶರಣಾಗತನಾದನನ್ನನ್ನು. ತ್ವತ್ ಶೇಷತ್ವೆ = ನಿನಗೆ ಶೇಷನೆಂದು ಇರುವುದರಲ್ಲಿ. ಸ್ಥಿರಧಿಯಂ = ದೃಢಬುದ್ಧಿವುಳ್ಳವನನ್ನಾಗಿಯೂ, ತ್ವತ್ಪ್ರಾಪ್ತಿ = ನಿನ್ನನ್ನು ಸೇರುವುದೇ. ಏಕಪ್ರಯೋಜನಂ = ಪರಮ ಪ್ರಯೋಜನವಾಗಿರುವವನನ್ನಾಗಿಯೂ. ನಿಷಿದ್ಧಕಾಮ್ಯರಹಿತಂ = ಶಾಸ್ತ್ರಗಳಿಂದ ನಿಷೇಧಿಸಲ್ಪಟ್ಟ ಕಾಮ್ಯಕರ್ಮಗಳನ್ನು ಬಿಟ್ಟವನನ್ನಾಗಿಯೂ ನಿತ್ಯಕಿಂಕರಂ = ಎಂದೆಂದಿಗೂ ನಿನ್ನ ಸೇವಕನನ್ನಾಗಿಯೂ, ಕುರು = ಮಾಡು (ಅನುಗ್ರಹಿಸು)

ತಾತ್ಪರ್ಯ :— ಹೊರಲಾರದ ಹೊರೆಯ ಹೊಣೆಯನ್ನು, ಮೋಕ್ಷಾಪೇಕ್ಷಿಯಾದ ಸಂಸಾರಿಯು, ಸರ್ವಜ್ಞನೂ, ಸರ್ವಶಕ್ತನೂ, ದಯಾಮಯನಾದ ಶ್ರೀಪತಿಗೆ ವಹಿಸಿಬಿಟ್ಟನು ಮೊದಲಿನ ಮೂರು ಶ್ಲೋಕಗಳಲ್ಲಿ ಉಪದೇಶಿಸಲ್ಪಟ್ಟ ಕ್ರಮದಲ್ಲಿ ಅವನಲ್ಲಿ 'ಭರನ್ಯಾಸ'ಮಾಡಿ 4ನೆಯ ಶ್ಲೋಕದಲ್ಲಿ ತನ್ನ ಈ ದೇಹಾನಂತರ, ತನ್ನನ್ನು ಅವನ ಪಾದಕ್ಕೆ ಸೇರಿಸಿಕೊಳ್ಳಬೇಕೆಂದು ಪ್ರಾರ್ಥಿಸಿದನು. ಇದರಿಂದ ಮಾಡಬೇಕಾದುದನ್ನು ಮಾಡಿ ಪ್ರಪನ್ನನು ಕೃತಕೃತ್ಯನಾದ ಸಂಸಾರಸಮುದ್ರ ದಾಟಿ ಶ್ರೀಹರಿಯ ಪಾದಾರವಿಂದ ಸೇರಲು ಭರನ್ಯಾಸಮಾಡಿದನು. ಸ್ವರ್ಗವೇ ಮೊದಲಾದ ಅಶಾಶ್ವತವಿತ ಫಲವನ್ನು ಕೊಡತಕ್ಕ ಕಾಮ್ಯಕರ್ಮಗಳ ಸಂಬಂಧ ಬಿಟ್ಟನು ತನ್ನ ಈ ದೇಹವಿರುವವರಿಗೆ ಅದರ ಯಾತ್ರೆ ಅವನ ಪ್ರಾರಬ್ಧ ಕರ್ಮದಂತೆ ನಡೆಯುವುದು. ಆದುದರಿಂದ ಪ್ರಪತ್ತಿಯನಂತರ ಈ ದೇಹವಿರುವವರಿಗೂ ಭಗವಂತನ ಆಜ್ಞಾರೂಪವಾದ ಶಾಸ್ತ್ರಗಳಂತೆ ನಡೆದುಕೊಳ್ಳುವುದೆ ಅವನು

ಮಾಡಬೇಕಾದ "ಉತ್ತರ ಕೃತ್ಯ". ಪ್ರಪನ್ನನು ಹೇಗಿರಬೇಕು, ಏನೇನು ಮಾಡಬೇಕು ಎಂಬುದನ್ನು, ಶ್ರೀ ವರದರಾಜನಲ್ಲಿ ಪ್ರಾರ್ಥನಾರೂಪವಾಗಿ ಸೂಚಿಸಿರುತ್ತಾರೆ. ಈ ಶ್ಲೋಕದಲ್ಲಿ ಇದಕ್ಕೆ ಅವಶ್ಯಕವಾದ ಮುಖ್ಯ ಧ್ಯೇಯ ಗಳನ್ನು ವಿವರಿಸುತ್ತಾರೆ. ಅವುಗಳು ಯಾವುವೆಂದರೆ 1) ಶ್ರಿಯಃಪತಿಗೇ ಶೇಷ ನಾನು ಎಂಬ ಸ್ಥಿರಬುದ್ಧಿ 2) ಭಗವಂತನ ಪಾದ ಸೇರುವುದೇ ನನ್ನ ಧ್ಯೇಯ ಪುರುಷಾರ್ಥ 3) ಅವನ ಆಜ್ಞಾರೂಪವಾದ ಶಾಸ್ತ್ರಗಳಂತೆ ನಡೆದುಕೊಳ್ಳುವುದು, ತನ್ನ ತನ್ನ ವರ್ಣಾಶ್ರಮಕ್ಕೆ ಅನುಗುಣವಾಗಿ 4) ಯಾವಾಗಲೂ ಅವನ ಕೈಂಕರ್ಯ ಅಂದರೆ, ಸೇವೆಯಲ್ಲಿ ಸಂತೋಷ ದಿಂದ ನಿರತನಾಗಿರುವುದು.

ದೇವೀಭೂಷಣ ಹೇತ್ಯಾದಿಜುಷ್ಟಸ್ಯ ಭಗವಂಸ್ತವ |
ನಿತ್ಯಂ ನಿರಪರಾಧೇಷು ಕೈಂಕರ್ಯೇಷು ನಿಯುಂಕ್ಷ್ವ ಮಾಮ್॥೬॥

ಅರ್ಥ :— ಭಗವನ್ = ಜ್ಞಾನ, ಬಲ, ಐಶ್ವರ್ಯ, ವೀರ್ಯ, ಶಕ್ತಿ, ತೇಜಸ್ಸು ಈ ಆರು ಗುಣಗಳಿಂದ ಪರಿಪೂರ್ಣನಾಗಿರುವ ಪುರುಷೋತ್ತ ಮನೆ ! ದೇವೀ = ಲಕ್ಷ್ಮಿ ಮೊದಲಾದ ದಿವ್ಯಮಹಿಷಿಯರುಗಳು, ಭೂಷಣ = ಕಿರೀಟ, ಕೌಸ್ತುಭ ಮೊದಲಾದ ದಿವ್ಯಾಭರಣಗಳು, ಹೇತಿ = ಶಂಖ, ಚಕ್ರ ಮೊದಲಾದ ದಿವ್ಯಾಯುಧಗಳು, ಆದಿ = ಇವೇ ಮೊದಲಾದವು ಗಳೊಡನೆ ಜುಷ್ಟಸ್ಯ = ಕೂಡಿ ಭಕ್ತರುಗಳಿಗೆ ದರ್ಶನವನ್ನು ದಯಪಾಲಿ ಸುತ್ತಿರುವ, ತವ = ನಿನ್ನ, ನಿರಪರಾಧೇಷು = ಯಾವ ಅಪರಾಧವೂ (ದೋಷವೂ) ಇಲ್ಲದ ಕೈಂಕರ್ಯೇಷು = ಸೇವೆಗಳಲ್ಲಿ ಮಾಂ = ನನ್ನನ್ನು ನಿಯುಂಕ್ಷ್ವ = ನೇಮಿಸು, ಅನ್ವಯಿಸು.

ತಾತ್ಪರ್ಯ: - ಹಿಂದಿನ ಶ್ಲೋಕದಲ್ಲಿ ಹೇಳಿದ ಕೈಂಕರ್ಯದ ಸ್ವರೂಪ ವನ್ನು ವಿಶೇಷಿಸಿರುತ್ತಾರೆ, ಈ ಶ್ಲೋಕದಲ್ಲಿ. ಸಕಲ ವಿಭೂತಿಗಳೊಡನೆ ಕೂಡಿರುವ ನಿನ್ನಲ್ಲಿ ಯಾವ ಅಪರಾಧವೂ ಇಲ್ಲದಂತೆ ಸದಾ ಸೇವೆ ಸಲ್ಲಿಸುವ ಹಾಗೆ ನನ್ನನ್ನು ನಿಯಮಿಸು ಎಂದು ಪ್ರಾರ್ಥಿಸುತ್ತಾರೆ.

ಈ ಲೋಕದಲ್ಲಿ ಜನರುಗಳಿಗೆ ದರ್ಶನಭಾಗ್ಯವನ್ನು ಹಾಗೆ ತನ್ನನ್ನು ಪೂಜಿಸುವ ಅವಕಾಶವನ್ನೂ ಕಲ್ಪಿಸಲು, ಭಗವಂತನು ದಿವ್ಯದೇಶಗಳ ದೇವಾಲಯಾದಿಗಳಲ್ಲಿ "ಅರ್ಚಾಮೂರ್ತಿ" ರೂಪವನ್ನು ತಾಳಿರುತ್ತಾನೆ.

ಈ ದಿವ್ಯ ಮಂಗಳ ವಿಗ್ರಹ ಸೇವೆಯಲ್ಲಿ ಭಕ್ತಿಪರವಶರಾದ ದೇಶಿಕರ ಸಂತೋಷಕ್ಕೆ ಮಿತಿಯೇ ಇಲ್ಲ. ತೃಪ್ತಿಯೇ ಇಲ್ಲ. ಶ್ರೀ ರಂಗನಾಥನ ಉತ್ಸವಗಳನ್ನು ಸೇವಿಸುತ್ತ ನೂರು ವರ್ಷಗಳಾದರೂ ಇರುವೆನು ಎಂದು ಪಾದುಕಾಸಹಸ್ರದಲ್ಲಿ ಹೇಳಿರುತ್ತಾರೆ.

ಭಗವಂತನ ಸೇವೆಯಂತೆಯೇ ಭಾಗವತರುಗಳ ಕೈಂಕರ್ಯವೂ ಮುಖ್ಯವಾದುದು ಪ್ರಪನ್ನನಿಗೆ

ಮಾಂ ಮದೀಯಂ ಚ ನಿಖಿಲಂ ಚೇತನಾಚೇತನಾತ್ಮಕಂ |
ಸ್ವಕೈಂಕರ್ಯೋಪಕರಣಂ ವರದ! ಸ್ವೀಕುರು ಸ್ವಯಂ || ೭ ||

ಅರ್ಥ :—ವರದ = ವರದನೆ, ಮಾಂ = ನನ್ನನ್ನೂ, ಮದೀಯಂ = "ನನ್ನವುಗಳೆಂಬ", ಚೇತನ ಅಚೇತನ ಆತ್ಮಕಂ = ಅರಿವು ಉಳ್ಳ, ಅರಿವು ಇಲ್ಲದ,ನಿಖಿಲಂ ಚ = ಎಲ್ಲವುಗಳನ್ನೂ,ಸ್ವಕೈಂಕರ್ಯ ಉಪಕರಣಂ = ನಿನ್ನ ಕೈಂಕರ್ಯಕ್ಕೆ ಬೇಕಾದ ಸಾಮಾಗ್ರಿಗಳಾಗಿ, ಸ್ವಯಂ = ನೀನೇ, ಸ್ವೀಕುರು = ಅಂಗೀಕರಿಸು,

ತಾತ್ಪರ್ಯ :—ನಿನ್ನಲ್ಲಿ ಶರಣು ಹೊಂದಿದ ನನ್ನನ್ನೂ, ನನಗೆ ಸೇರಿದವ ಎಂದು ಹೇಳಲ್ಪಡುವ ಸಜೀವರುಗಳು, ನಿರ್ಜೀವಗಳನ್ನೂ ನಿನ್ನ ಕೈಂಕರ್ಯಕ್ಕೆ ಉಪಯೋಗವಾಗುವಂತೆ ಅನುಗ್ರಹಿಸು ವರದ! ಭಗವಂತನೆ.

"ಸ್ವಕೈಂಕರ್ಯ" ಎಂಬುದರಲ್ಲಿ"ಸ್ವ"ಎಂಬ ಪದವು ಭಗವಂತನನ್ನೂ ಅವನಿಗೆ ಸೇರಿದವರು ಭಕ್ತರುಗಳು ಎಲ್ಲರನ್ನೂ ಬೋಧಿಸುತ್ತದೆ.

"ಸ್ವಯಂ ಸ್ವೀಕುರು" ನೀನೇ ಅಂಗೀಕರಿಸು. ನನ್ನದು ಎಂದು ಹೇಳಲ್ಪಡುವ ಚೇತನ ಅಚೇತನಗಳು ನನ್ನವಲ್ಲ, ಆದರೂ ನನ್ನವೆಂಬ ತಪ್ಪು ಭಾವನೆ ಮಾಡಿದರೆ, ಈ ದುರಭಿಪ್ರಾಯದಿಂದ ಅವುಗಳನ್ನು ನಾನು ಅಪಹರಿಸಲು ಯತ್ನಿಸಬಹುದು. ಹೀಗೆ ಮಾಡಲು ನನಗೆ ಅವಕಾಶವಿಲ್ಲದಂತೆ, ನೀನೆ ನಿನ್ನ ಮತ್ತು ನಿನ್ನವರ ಸೇವೆಗೆ ಅವುಗಳನ್ನೆಲ್ಲಾ ಸ್ವೀಕರಿಸು ಸ್ವಾಮಿ! ಎಂದು ಬೇಡಿಕೊಂಡಿರುತ್ತಾರೆ.

ತ್ವದೇಕರಕ್ಷ್ಯಸ್ಯ ಮಮ ತ್ವಮೇವ ಕರುಣಾಕರ ||
ನ ಪ್ರವರ್ತಯ ಪಾಪಾನಿ ಪ್ರವೃತ್ತಾನಿ ನಿವರ್ತಯ || ೮ ||

ಅರ್ಥ :—ಕರುಣಾಕರ ! = ಕರುಣಾ ಸಾಗರನೇ ! ತ್ವತ್ ಏಕ ರಕ್ಷಸ್ಯ = ನಿನ್ನಿಂದಲೇ ಕಾಪಾಡಲ್ಪಡಬೇಕಾಗಿರುವ, ಮಮ = ನನ್ನನ್ನು. ಪಾಪಾನಿ ನ ಪ್ರವರ್ತಯ = ಪಾಪದಲ್ಲಿ ತೊಡಗಿಸಬೇಡ, ಪ್ರವೃತ್ತಾನಿ ನಿವರ್ತಯ = ಮಾಡುತ್ತಲಿರುವ ಪಾಪಗಳನ್ನು ತೊಡೆದು ಹಾಕು.

ತಾತ್ಪರ್ಯ:—ಇದು ಮತ್ತು ಮುಂದಿನ ಶ್ಲೋಕದಲ್ಲಿ,ಇಲ್ಲಿನವರಿಗೂ ಮಾಡಿರುವ ಪಾಪಗಳನ್ನು ಕ್ಷಮಿಸಿ, ಮುಂದೆ ಪಾಪಗಳನ್ನು ಮಾಡದಂತೆ ನನ್ನನ್ನು ಕಾಪಾಡಬೇಕು. ಎಂದು "ಅಪರಾಧಪರಿಹಾರವನ್ನು" ಪ್ರಾರ್ಥಿಸಿ ರುವರು. ನೀನೇ ನನ್ನನ್ನು ಕಾಪಾಡಬೇಕು ಬೇರಾರೂ ಇಲ್ಲ ಎಂದು ಬಿನ್ನಯಿಸಿಕೊಂಡಿರುತ್ತಾರೆ. ಇದನ್ನೆ ಬಹಳ ಸ್ವಾರಸ್ಯವಾಗಿ ಕಾಮಾ ಸಿಕಾಷ್ಟಕವೆಂಬ ಅವರ ಸ್ತೋತ್ರದಲ್ಲಿ ಹೇಳಿರುತ್ತಾರೆ. ನೀನು ಕಾಪಾಡಿದರೆ ಬೇರೆ ರಕ್ಷಕರು ಏತಕ್ಕೆ, ನೀನು ರಕ್ಷಿಸದಿದ್ದರೆ ಬೇರೆ ರಕ್ಷಕರು ತಾನೇ ಏತಕ್ಕೆ ಎಂದು (ತ್ವಯಿರಕ್ಷತಿ ರಕ್ಷಕೈಃ ಕಿಮನ್ಯೈಃ ತ್ವಯಿಚಾರಕ್ಷತಿ ರಕ್ಷಕೈಃ ಕಿಮನ್ಯೈಃ")

ಹಿಂದಿನ ಜನ್ಮಗಳ ಕರ್ಮಗಳು ವಾಸನಾರೂಪವಾಗಿ ಕೂಡಿಕೊಂಡು "ಸಂಚಿತಕರ್ಮ"ಗಳಾಗಿರುತ್ತವೆ. ಅವುಗಳಲ್ಲಿ ಒಂದು ಭಾಗವು ಪ್ರತಿ ಜನ್ಮ ದಲ್ಲಿಯೂ "ಪ್ರಾರಬ್ಧ ಕರ್ಮ"ವಾಗಿ ಜೀವನ ಬೆನ್ನು ಹತ್ತುತ್ತದೆ. ಇದನ್ನು ಅನುಭವಿಸಿಯೇ ತೀರಬೇಕು. ಆದರೆ ಪ್ರಪತ್ತಿ ಮಾಡಿಕೊಂಡವನ ಸಂಚಿತ ಕರ್ಮವೂ, ಈಗಿನ ಜನ್ಮದಲ್ಲಿ ಪ್ರಪತ್ತಿವರಿಗೆ ಮಾಡಿದ ಪ್ರಾರಬ್ಧಕರ್ಮವೂ ಭಗವಂತನ ದಯೆಯಿಂದ ಸುಟ್ಟುಹೋದ ಬೀಜಗಳಂತೆ ನಿಷ್ಫಲವಾಗುತ್ತದೆ. ಶರಣಾಗತನಾದನಂತರ ಇರುವ ಜೀವಮಾನದಲ್ಲಿ ಹೊಸ ಪಾಪ ಮಾಡ ದಂತೆಯೂ, ಹಾಗೆ ಅರಿವಿಲ್ಲದೆ ಶಕ್ತಿಮಾರಿ ಆದ ಪಾಪಗಳನ್ನು ಪರಿ ಹರಿಸುವಂತೆ ("ಮಾಮೇಕಂ ಶರಣಂವ್ರಜ" "ಸರ್ವಪಾಪೇಭ್ಯಃ ಮೋಕ್ಷ ಯಿಷ್ಯಾಮಿ") ನನ್ನಲ್ಲಿ ಶರಣು ಹೊಂದು, ಎಲ್ಲ ಪಾಪಗಳಿಂದಲೂ ಬಿಡು ಗಡೆ ಮಾಡುತ್ತೇನೆ ಎಂದು ಗೀತೆಯಲ್ಲಿ ಅಭಯ ಭರವಸೆಯನ್ನು ಅನು ಗ್ರಹಿಸಿರುವ ಭಗವಂತನನ್ನು ಬೇಡಿರುತ್ತಾರೆ.

ಅಕೃತ್ಯಾನಾಂ ಚ ಕರಣಂ ಕೃತ್ಯಾನಾಂ ವರ್ಜನಂ ಚ ಮೇ ।
ಕ್ಷಮಸ್ವ ನಿಖಿಲಂ ದೇವ ಪ್ರಣತಾರ್ತಿಹರ ಪ್ರಭೋ ॥ ೯ ॥

ಅರ್ಥ ;—ಪ್ರಣತ ಆರ್ತಿಹರ = ಶರಣಾಗತರ ದುಃಖಗಳನ್ನು ಹೋಗಲಾಡಿಸುವವನೆ! ಪ್ರಭೋ = ಎಲ್ಲರಿಗೂ ಎಲ್ಲದಕ್ಕೂ ಒಡೆಯನೆ! ದೇವ = ಭಗವಂತನೆ! ಮೇ = ನನ್ನ, ಅಕೃತ್ಯಾನಾಂ = ಮಾಡಕೂಡದಾದವುಗಳ, ಕರಣಂ ಚ = ಮಾಡುವಿಕೆಯನ್ನೂ, ಕೃತ್ಯಾನಾಂ = ಮಾಡಬೇಕಾಗಿರುವುದರ, ಅಕರಣಂ ಚ = ಮಾಡದೇ ಇರುವುದನ್ನೂ, ನಿಖಿಲಂ = ಇವೆಲ್ಲವನ್ನೂ, ಕ್ಷಮಸ್ವ = ಕ್ಷಮಿಸು.

ನಾವು ಮನಸ್ಸು, ಮಾತು, ಶರೀರ (ಮನೋವಾಕ್ಕಾಯ) ಗಳ ಮೂಲಕ ಮಾಡುವ ಪಾಪಗಳು ಎರಡು ಬಗೆಯವುಗಳು—ಮಾಡಕೂಡದೆಂದು ಶಾಸ್ತ್ರಗಳು ನಿಷೇಧಿಸಿರುವುದನ್ನು ಮಾಡುವುದು ಎಂದು. ಮಾಡಲೇಬೇಕೆಂದು ವಿಧಿಸಿರುವುದನ್ನು ಮಾಡದಿರುವು ಎಂದು ಶರಣು ಹೊಕ್ಕವರ ದುಃಖಗಳನ್ನು ಹೋಗಲಾಡಿಸತಕ್ಕ ವರದರಾಜಸ್ವಾಮಿಯಲ್ಲಿ ನನ್ನ ಇಂತಹ ಪಾಪಗಳನ್ನೆಲ್ಲಾ ಕ್ಷಮಿಸು ಎಂದು ಪ್ರಾರ್ಥಿಸಿರುತ್ತಾರೆ.

ಶ್ರೀಮನ್ ನಿಯತ ಪಂಚಾಂಗಂ ಮದ್ರಕ್ಷಣಭರಾರ್ಪಣಂ ।
ಅಚೀಕರಃ ಸ್ವಯಂ ಸ್ವಸ್ಮಿನ್ ಅತೋಽಹಮಿಹನಿರ್ಭರಃ ॥ ೧೦ ॥

ಅರ್ಥ :—ಶ್ರೀಮನ್ = ಶ್ರೀಪತಿಯೆ, ನಿಯತ ಪಂಚ ಅಂಗಂ = ಅವಶ್ಯಕವಾದ ಐದು ಅಂಗಗಳೊಡನೆ ಕೂಡಿರುವ, ಮತ್‌ರಕ್ಷಣಭರಾರ್ಪಣಂ = ನನ್ನ ರಕ್ಷಾಭರಸಮರ್ಪಣವನ್ನು, ಸ್ವಯಂ = ನೀನೇ, ಸ್ವಸ್ಮಿನ್ = ನಿನ್ನಲ್ಲಿ, ಅಚೀಕರಃ = ಮಾಡಿಸಿಕೊಂಡೆ, ಅತಃ = ಆದುದರಿಂದ, ಅಹಂ = ನಾನು, ಇಹ = ನನ್ನ ರಕ್ಷಣೆವಿಷಯದಲ್ಲಿ, ನಿರ್ಭರಃ = ಯಾವ ಹೊರೆಯೂ ಹೊಣೆಯೂ ಇಲ್ಲದವನಾಗಿರುತ್ತೇನೆ.

ತಾತ್ಪರ್ಯ :—ಶ್ರೀ ವರದರಾಜಸ್ವಾಮಿಯೇ! ನಿನ್ನಲ್ಲಿ ನನ್ನ ರಕ್ಷಾಭರಸಮರ್ಪಣವನ್ನು ನೀನೆ ನನ್ನ ಕೈಯಲ್ಲಿ ಮಾಡಿಸಿರುವೆ. ಇದರಿಂದ ನನ್ನ ತಲೆಯ ಮೇಲಿದ್ದ ಹೊರೆಯ ಭಾರ ಕಳೆದು, ನನಗೆ ಯಾವ ಹೊಣೆಯೂ ಚಿಂತೆಯೂ ಇಲ್ಲದ ಹಾಗಾಗಿರುತ್ತದೆ.

ನಿಯುತಪಂಚಾಂಗಂ-ಭರನ್ಯಾಸಕ್ಕೆ ನಿಯುತವಾದ ಐದು ಅಂಗಗಳು ಮೊದಲ ಎರಡನೆಯ ಶ್ಲೋಕದ ತಾತ್ಪರ್ಯದಲ್ಲಿ ವಿವರಿಸಲ್ಪಟ್ಟಿವೆ. ಈ ಅಂಗಗಳಿಲ್ಲದೆ ಪ್ರಪತ್ತಿಯೂ ಸಾಂಗವಾಗಿ ನೆರವೇರುವುದಿಲ್ಲ ಎಂಬುದು ಇಲ್ಲಿ ವಿಶದಪಡಿಸಲ್ಪಟ್ಟಿರುತ್ತದೆ.

ಮೂರನೆಯ ಶ್ಲೋಕದಂತೆಯೆ, ಈ ಶ್ಲೋಕವು "ಸಾತ್ತ್ವಿಕತ್ಯಾಗ" ವಾಗಿರುತ್ತದೆ. ಎಲ್ಲಾ ಕರ್ಮಗಳ ಮೊದಲಿನಲ್ಲಿಯೂ ಕೊನೆಯಲ್ಲಿಯೂ ಇದನ್ನು ಮಾಡಬೇಕೆಂಬುದು ನಿಯುಮ. ಕರ್ಮ ಪ್ರಾರಂಭದಲ್ಲಿ ಸಾತ್ತ್ವಿಕ ಸಂಕಲ್ಪ, ಕೊನೆಯಲ್ಲಿ ಸಾತ್ತ್ವಿಕತ್ಯಾಗ ಈ ಎರಡು ಮನೋಭಾವಗಳು 3 ಮತ್ತು 10ನೆಯ ಶ್ಲೋಕಗಳಲ್ಲಿ ಕ್ರಮವಾಗಿ ನಿರ್ದೇಶಿಸಲ್ಪಟ್ಟಿವೆ.

ಇಲ್ಲಿಗೆ ನ್ಯಾಸದಶಕ ಗ್ರಂಥವು ಮುಗಿಯಿತು. ಆದರೆ ಈ ದಶಕದ ಅನುಸಂಧಾನದಲ್ಲಿ, ಶ್ರೀ ದೇಶಿಕರವರಿಂದಲೇ ರಚಿತವಾದ "ನ್ಯಾಸವಿಂಶತಿ" ಎಂಬ ಮತ್ತೊಂದು ಗ್ರಂಥದ ಕೊನೆಯ ಶ್ಲೋಕವನ್ನು ಪಠಿಸುವುದು ಬಹು ಕಾಲದಿಂದ ಬಂದಿರತಕ್ಕ ಸಂಪ್ರದಾಯ ಇದನ್ನನುಸರಿಸಿ ಆ ಶ್ಲೋಕವು ಅರ್ಥದೊಡನೆ ಕೆಳಗೆ ವಿವರಿಸಲ್ಪಟ್ಟಿರುತ್ತದೆ.

ಸಂಸಾರಾವರ್ತವೇಗಪ್ರಶಮನಶುಭದೃಗ್ದೇಶಿಕಪ್ರೇಕ್ಷಿತೋಽಹಂ ।
ಸಂತ್ಯಕ್ತೋಽನ್ಯೈರುಪಾಯೈರನುಚಿತ ಚರಿತೇಷ್ವದ್ಯ ಶಾಂತಾಭಿಸಂಧಿಃ॥
ನಿಶ್ಶಂಕಸ್ತತ್ತ್ವದೃಷ್ಟ್ಯಾ ನಿರವಧಿಕದಯಂ ಪ್ರಾಪ್ಯ ಸಂರಕ್ಷಕಂ ತ್ವಾಂ।
ನ್ಯಸ್ಯ ತ್ವತ್ಪಾದಪದ್ಮೇ ವರದ ನಿಜಭರಂ ನಿರ್ಭರೋ ನಿರ್ಭಯೋಽಸ್ಮಿ॥

ಅರ್ಥ :—ವರದ = ವರದನೆ! ಅಹಂ = ನಾನು, ಸಂಸಾರ = ಸಂಸಾರವೆಂಬ, ಆವರ್ತ = ನೀರಿನ ಸುಳಿಯ ವೇಗ = ಜೋರಾದ ಸೆಳೆತವನ್ನು, ಪ್ರಶಮನ = ಅಡಗಿಸುವ, ಶುಭದೃಕ್ = ಮಂಗಳ ದೃಷ್ಟಿಯುಳ್ಳ, ದೇಶಿಕ = ಆಚಾರ್ಯರುಗಳಿಂದ, ಪ್ರೇಕ್ಷಿತಃ = ಕಟಾಕ್ಷಿಸಲ್ಪಟ್ಟವನಾಗಿ, ಅನ್ಯೈಃ = ಇನ್ನು ಬೇರೆಯಾದ, ಉಪಾಯೈಃ = ಉಪಾಯುಗಳಿಂದ, ಸಂತ್ಯಕ್ತ = ಬಿಡಲ್ಪಟ್ಟವನಾಗಿ, ಅದ್ಯ = ಈವಾಗ, ಅನುಚಿತಚರಿತೇಷು = ತಕ್ಕದಲ್ಲದ ನಡತೆಗಳಲ್ಲಿ, ಶಾನ್ತಾಭಿಸಂಧಿಃ = ಮನಸ್ಸಿಲ್ಲದವನಾಗಿ, ತತ್ತ್ವದೃಷ್ಟ್ಯಾ = ತತ್ತ್ವಜ್ಞಾನದಿಂದ, ನಿಶ್ಶಂಕಃ = ಯಾವ ಸಂಶಯುವೂ ಇಲ್ಲದವನಾಗಿ, ನಿರವಧಿಕದಯಂ = ಎಲ್ಲೆ ಇಲ್ಲದ ದಯೆಯೆ ಆಗಿರತಕ್ಕ, ಸಂರಕ್ಷಕಂ =

ಚೆನ್ನಾಗಿ ರಕ್ಷಿಸುವನೂ ಆದ, ತ್ವಾಂ = ನಿನ್ನನ್ನು, ಪ್ರಾರ್ಥ್ಯ = ಪ್ರಾರ್ಥಿಸಿ ದವನಾಗಿಯೂ ನಿಜಭರಂ = ನನ್ನ ಹೊರೆಯನ್ನು ತ್ವತ್ಪಾದಪದ್ಮೆ = ನಿನ್ನ ಚರಣಕಮಲದಲ್ಲಿ, ನ್ಯಸ್ಯ = ಸಮರ್ಪಿಸಿ, ನಿರ್ಭರಃ = ಯಾವ ಹೊರೆಯೂ ಇಲ್ಲದವನೂ, ನಿರ್ಭಯಃ = ಯಾವ ಭಯವೂ ಇಲ್ಲದವನಾಗಿ, (ಅಹಂ) ಅಸ್ಮಿ = ಆಗಿರುತ್ತೇನೆ.

ತಾತ್ಪರ್ಯ :— ಈ ಶ್ಲೋಕವು ಸ್ರಗ್ಧರಾಛಂದಸ್ಸಿನಲ್ಲಿದೆ, ಪ್ರತಿಪಾದ ದಲ್ಲಿಯೂ 21 ಮಾತ್ರೆಗಳು, ನ್ಯಾಸದಶಕದ ಶ್ಲೋಕಗಳು ಅನುಷ್ಟುಪ್ ಛಂದಸ್ಸಿನಲ್ಲಿ, 8 ಮಾತ್ರೆಗಳು ಒಂದೊಂದು ಪಾದದಲ್ಲೂ ಇವೆ.

ಈ ಶ್ಲೋಕದಲ್ಲಿ ನ್ಯಾಸದಶಕದ 1 2ನೆಯ ಶ್ಲೋಕಗಳ ಮುಖ್ಯಾಂಶ ಗಳನ್ನು ವಿಸ್ತರಿಸಿ ಉಪದೇಶಿಸಿರುತ್ತಾರೆ. ಆಚಾರ್ಯರ ಕಟಾಕ್ಷಕ್ಕೆ ಪಾತ್ರ ನಾಗಿ, ಅವರ ಕೃಪೆಯಿಂದ "ಪ್ರಪತ್ತಿ" ನಡೆಯಬೇಕು ಎಂಬುವ ಹೊಸ ವಿಷಯ ಸೂಚಿಸಲ್ಪಟ್ಟಿರುತ್ತದೆ. ಪ್ರಪತ್ತಿಗೆ ಅವಶ್ಯಕವಾದ ಐದು ಅಂಗ ಗಳೂ ನಿರೂಪಿಸಲ್ಪಟ್ಟು, ಕೊನೆಯ ಪಾದದಲ್ಲಿ ಭರನ್ಯಾಸ ಮಾಡಿಕೊಳ್ಳು ವರೂ, ಇದರ ಫಲವಾದ "ಕೃತಕೃತ್ಯತೆ"ಯೂ, ಇದರ ಕುರುಹಾದ ನಿರ್ಭರತಾ, ನಿರ್ಭಯತ್ವ-ಇವುಗಳೆಲ್ಲವನ್ನೂ ಭಾವಗರ್ಭಿತವಾದ ಪದ ಗಳಿಂದ ಅಮೋಘ ರೀತಿಯಲ್ಲಿ ಉಪದೇಶಿಸಿರುತ್ತಾರೆ, ಕವಿತಾರ್ಕಿಸಿಂಹರೂ ಜ್ಞಾನವೈರಾಗ್ಯವೇ ಮೊದಲಾದ ಕಲ್ಯಾಣಗುಣಸಂಪನ್ನರೂ 'ವೇದಾಂತ ಗುರುಗಳೂ ಆದ ವೇಂಕಟನಾಥರವರು.

ಕವಿತಾರ್ಕಿಕಸಿಂಹಾಯ ಕಲ್ಯಾಣಗುಣಶಾಲಿನೇ ।
ಶ್ರೀಮತೇ ವೇಂಕಟೇಶಾಯ ವೇದಾಂತಗುರವೇ ನಮಃ ॥

---

ಶ್ರೀಕಾಂತ ಪವರ್ ಪ್ರೆಸ್, ಮೈಸೂರು-4